# ಅಚಲ ತಿಂಗಳ ಪತ್ರಿಕೆ

21

ಫೆಬ್ರವರಿ - 2004

## ಒಳಗೇನಿದೆ






ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 19 ಸಂಚಿಕೆ : 2

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004

ಆತ್ಮೀಯರೆ,

ಕಳೆದ 19 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

## ಅಚಲದ ಚಂದಾ ಬದಲಾಗಿದೆ

ವಾರ್ಷಿಕ ಚಂದಾ - ರೂ. 50/- (ವ್ಯಕ್ತಿಗಳಿಗೆ)
ರೂ. 100/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

**ಅಚಲ ವಿಳಾಸ**

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

## ಸಂಪಾದಕೀಯ

# ಕೋಮುವಾದಿ ಭಯೋತ್ಪಾದನೆಯ ಮತ್ತೊಂದು ರೂಪ

ಕಳೆದ ಕೆಲವು ತಿಂಗಳುಗಳಲ್ಲಿ ಕೋಮುವಾದಿಗಳ ವಿಕಟ ಅಟ್ಟಹಾಸ ದೇಶದಲ್ಲೆಲ್ಲಾ ಹಲವು ಭಾಗಗಳಲ್ಲಿ ವಿಜೃಂಭಿಸಿವೆ. ಪುಣೆಯ ಭಂಡಾರ್‌ಕರ್ ಸಂಸ್ಥೆಯ ಮೇಲಿನ ದಾಳಿ, ಅಲ್ಪಸಂಖ್ಯಾತರ ಮನೆ, ಮಠಗಳ ಹಾವಳಿ ಇತ್ಯಾದಿ. ಇಂತಹ ಅನಾಹುತಗಳ ಜೊತೆಗೆ ಇತ್ತೀಚೆಗೆ ಭುವನೇಶ್ವರದ ಜಗತ್‌ಸಿಂಗ್‌ಪುರದ ಜಿಲ್ಲೆಯಲ್ಲಿ ಕ್ರಿಶ್ಚಿಯನ್ ಮತಾಂತರ ನಡೆಯುತ್ತಿದೆಯೆಂದು ಆರೋಪಿಸಿ ಹಳ್ಳಿಗರ ಮೇಲೆ ನಡೆದ ಹಲ್ಲೆ ತೀರ ಅಮಾನವೀಯವಾದದ್ದು. ಜಗತ್‌ಸಿಂಗ್‌ಪುರ ಜಿಲ್ಲೆಗೆ ಸೇರಿದ ಕಿಲಿಪಾಲ್ ಮತ್ತು ಕನಿಮುಲ್ ಎರಡು ಚಿಕ್ಕ ಹಳ್ಳಿಗಳು. ಅಲ್ಲಿ ಕ್ರಿಶ್ಚಿಯನ್ ಮತಕ್ಕೆ ಇತ್ತೀಚೆಗೆ ಸೇರಿಕೊಂಡರೆನ್ನಲಾದ ಸುಮಾರು ಇಪ್ಪತ್ತು ಮಂದಿ ಜನರ ಮೇಲೆ ರೊಚ್ಚಿಗೆದ್ದ ಸ್ಥಳೀಯ ಹಳ್ಳಿಗರು ಅವರನ್ನು ಬಲವಂತವಾಗಿ ಥಳಿಸಿ, ಚಿತ್ರಹಿಂಸೆಗೊಳಿಸಿ ತಲೆಬೋಳಿಸಿದ ದಾರುಣ ಘಟನೆ ನಡೆದಿದೆ. ಇವರಲ್ಲಿ ಬಹುಪಾಲು ಮಹಿಳೆಯರು. ಈ ರೀತಿ ತಲೆಬೋಳಿಸಿಕೊಂಡ ಮಹಿಳೆಯರಲ್ಲಿ ಐವತ್ತರ ವಯಸ್ಸಿನವರಿಂದ ಹಿಡಿದು ಚಿಕ್ಕ ಮಕ್ಕಳೂ ಇದ್ದಾರೆ. ತನ್ನ ಮೇಲೆರಗಿದ ಈ ದುಷ್ಕೃತ್ಯವನ್ನು ತಡೆಯಲು ಪ್ರತಿಭಟಿಸಿದ ಮಹಿಳೆಯನ್ನು ಅವಾಚ್ಯವಾಗಿ ನಿಂದಿಸಿ, ಅವಳನ್ನು ಸಾರ್ವಜನಿಕವಾಗಿ ವಿವಸ್ತ್ರಗೊಳಿಸಿ ಹಿಂಸಿಸಿ ಅವಮಾನಿಸಿದ ಘಟನೆಯು ನಡೆದಿದೆ. ತಮ್ಮ ಈ ಅನುಭವವನ್ನು ದೂರದರ್ಶನದ ಸಂದರ್ಶನದಲ್ಲಿ ನಿವೇದಿಸುತ್ತಿದ್ದ ಆ ಹೆಂಗಸರ ರೋದನ ಮುಗಿಲು ಮುಟ್ಟುವಂತಿತ್ತು.

ಗಂಡ ಸತ್ತ ಹೆಂಡತಿಗೆ ತಲೆ ಬೋಳಿಸಿ, ಕುರೂಪಗೊಳಿಸುವ ಕ್ರೂರ ಸಂಪ್ರದಾಯ ಹಿಂದೂಗಳ ಒಂದು ಜಾತಿ ಪಂಗಡಗಳಲ್ಲಿ ಹಿಂದಿತ್ತು. ಆಧುನಿಕ ಶಿಕ್ಷಣ ಮತ್ತು ಆರ್ಥಿಕ ಪ್ರಗತಿಯಿಂದಾಗಿ ಇಂತಹ ಅಮಾನವೀಯ ಕೃತ್ಯಗಳು ಕಡಿಮೆಯಾಗುತ್ತಾ ಬಂದಿದ್ದರೂ ಈಗ ಅವು ಸಂಪೂರ್ಣವಾಗಿ ಇಲ್ಲವಾಗಿದೆ, ಎಂದು ಧೈರ್ಯವಾಗಿ ಹೇಳುವಂತಿಲ್ಲ. ಆದರೂ ಇತ್ತೀಚೆಗೆ ಹೆಚ್ಚಿದ ಧಾರ್ಮಿಕ ಡಂಭಾಚಾರ ಮತ್ತು ಕ್ರೂರ ಸಂಪ್ರದಾಯಗಳ ನವೀಕರಣದ ಹಿನ್ನೆಲೆಯಲ್ಲಿ ಇವು ಮತ್ತೆ ಮರುಕಳಿಸುವಂತಿಲ್ಲ, ಎಂದು ಹೇಳಲಾಗದು. ಕಳೆದ ವರ್ಷ ಶಹಾಬಾದ್‌ನಲ್ಲಿ ತಾಯಿಯ ಇಚ್ಚೆಗೆ ವಿರುದ್ಧವಾಗಿ ಗಂಡು ಮಕ್ಕಳು ಆಕೆಯ ಕೇಶಮುಂಡನ ಮಾಡಿದ ಘಟನೆ ವರದಿಯಾಗಿದೆ. ಹೀಗೆ ಕುಟುಂಬದೊಳಗಿನ ಸಾಂಪ್ರದಾಯಿಕ ಶೋಷಣೆಯ ಸ್ವರೂಪ ಇದಾದರೆ, ಸಾರ್ವಜನಿಕವಾಗಿ ಹೆಣ್ಣನ್ನು ಅಪಮಾನಿಸಲೆಂದು ನಡೆಸುವ ಕೇಶಮುಂಡನದಂತಹ ಹಿಂಸೆ ಇನ್ನೂ ಭಯಾನಕ, ಅಷ್ಟೇ ಖಂಡನೀಯ.

ಧಾರ್ಮಿಕ ಸ್ವಾತಂತ್ರ್ಯವಿರುವ ನಾಡು ನಮ್ಮದೆಂದು ಹೇಳಿಕೊಂಡು ತಿರುಗಾಡುವ ನಮ್ಮ ನಾಡಿನಲ್ಲಿ ಇತ್ತೀಚೆಗೆ ಹೆಚ್ಚಾಗುತ್ತಿರುವ ಧಾರ್ಮಿಕ ಭಯೋತ್ಪಾದನೆ ನಮ್ಮನ್ನು ಎಲ್ಲಿಗೊಯ್ಯಬಹುದು, ಎನ್ನುವುದು ಯಾರ ಊಹೆಗೂ ನಿಲುಕದು. ನಾವು ಯಾವ ಜಾತಿಯಲ್ಲಿ ಹುಟ್ಟಿರುತ್ತೇವೆ, ಯಾವ ಮತದಲ್ಲಿ ಹುಟ್ಟಿರುತ್ತೇವೆ, ಎಂಬುದು ನಮ್ಮ ಆಯ್ಕೆಯಲ್ಲ. ಆದರೆ ನಾವು ಯಾವ ಶ್ರದ್ಧೆಯನ್ನು ಅನುಸರಿಸಬೇಕು, ಎಂಬುದು ನಮ್ಮ ಆಯ್ಕೆಯಾಗಿರಬೇಕು. ಇಂತಹ ಧಾರ್ಮಿಕ ಸ್ವಾತಂತ್ರ್ಯವನ್ನು ಅಪೇಕ್ಷಿಸುವವರ ಮೇಲೆ ಹಲ್ಲೆ ನಡೆಸುವುದು, ಅಪಮಾನಗೊಳಿಸುವುದು ಫ್ಯಾಸಿಸ್ಟ್ ಮನೋವೃತ್ತಿಯಷ್ಟೇ. ಅದು ಕೇವಲ ಕೆಲವು ಮಂದಿಯ ಬೇಜವಾಬ್ದಾರಿಯ ಘಟನೆಯೆಂದು ನಿರ್ಲಕ್ಷಿಸಲಾಗದು. ಒರಿಸ್ಸಾದ ಹಳ್ಳಿಯ ಜನರ ಮೇಲೆ ನಡೆಸಿದ ಈ ಘಟನೆಗೆ ಪ್ರತಿಷ್ಠಿತರ, ಅಧಿಕಾರದಲ್ಲಿರುವವರ ಬೆಂಬಲವಿದ್ದೇ ಇರುತ್ತದೆ. ಪೋಲೀಸರು ಮೂವತ್ತು ಮಂದಿಯ ಮೇಲೆ ಎಫ್.ಐ.ಆರ್. ಹಾಕಿರುವುದಾಗಿ ಹೇಳಿಕೊಂಡಿದ್ದಾರೆ. ಫ್ಯಾಸಿಸ್ಟ್ ಶಕ್ತಿಗಳೇ ಇಂದು ದೇಶವನ್ನು ಆಳುತ್ತಿರುವಾಗ ಈ ದುರ್ಬಲ ಅಲ್ಪಸಂಖ್ಯಾತರಿಗೆ ರಕ್ಷಣೆ ಸಿಕ್ಕುವುದು ಕನಸಾಗುತ್ತದೆ. ಚುನಾವಣೆ ಹತ್ತಿರ ಬರುತ್ತಿದ್ದಂತೆ ಇಂತಹ ಘಟನೆಗಳು ಮತ್ತೆ ಮತ್ತೆ ತಲೆಯೆತ್ತುತ್ತಿರುವುದನ್ನು ನೋಡಿದರೆ ಇಂದಿನ ಮತದಾರನ ಪಾತ್ರ ನಿರ್ಣಾಯಕವಾದುದು ಎಂಬುದರಲ್ಲಿ ಸಂಶಯವಿಲ್ಲ.

- ಎನ್. ಗಾಯತ್ರಿ

# ಹುಡುಗಿಯರಿಗೆ ಶಿಕ್ಷಣ

**- ಶಶಿತರೂರ್**

ವಿಶ್ವಸಂಸ್ಥೆಯ ಅಧಿಕಾರಿಯಾಗಿ ನಾನು ನನ್ನನ್ನೇ ಹಲವು ಬಾರಿ ಪ್ರಶ್ನಿಸಿಕೊಳ್ಳುವುದಿದೆ. ಅದರಲ್ಲೂ ವಿಶೇಷವಾಗಿ ಒಂದು ಸಾಮಾನ್ಯ ಜನಸಮುದಾಯವನ್ನು ಕುರಿತು ಸಭೆಯನ್ನು ಮಾತನಾಡುವಾಗ ಒಂದು ಪ್ರಶ್ನೆ ನನ್ನ ಮುಂದೆ ಏಳುತ್ತದೆ : "ಈ ಜಗತ್ತನ್ನು ಸುಧಾರಿಸಲು ಅತಿ ಮುಖ್ಯವಾದ ಒಂದು ಅಂಶ ಯಾವುದು?" ಈ ಪ್ರಶ್ನೆಗೆ ಉತ್ತರಿಸುವುದು ಕಷ್ಟಸಾಧ್ಯವೆಂಬ ಸತ್ಯ. ಇಂದಿನ ಅಧಿಕಾರಶಾಹಿಯ ಮುಂದಿರುವ ಹಲವಾರು ಸವಾಲುಗಳು ಮತ್ತು ಸಮಸ್ಯೆಗಳ ಅರಿವಿದ್ದರೂ, ಮಾನವೀಯತೆಯ ವಿರುದ್ಧದ ಸಂಘರ್ಷಗನ್ನು ಎದುರಿಸಬೇಕಾಗಿ ಬಂದಾಗ ಇಂತಹ ಸರಳ ಪ್ರಶ್ನೆಗೆ ಉತ್ತರಿಸುವುದು ಕಷ್ಟ ಆದರೂ ಇತ್ತೀಚೆಗೆ ಅಸಾಧ್ಯವೆನ್ನಬಹುದಾದ ಈ ಪ್ರಶ್ನೆಗೆ ನಾನು ಇತ್ತೀಚೆಗೆ ಕಂಡುಕೊಂಡ ಉತ್ತರ 'ಹುಡುಗಿಯರಿಗೆ ಶಿಕ್ಷಣ'.

ಈ ಎರಡು ಪದಗಳ ಉತ್ತರ ತುಂಬ ಸರಳವಾಗಿ ಕಾಣಬಹುದು. ಆದರೆ ಈ ಎರಡು ಪದಗಳೊಳಗೆ ಅಡಿಗಿರುವ ಕ್ರಿಯೆ ಇಡೀ ಮನುಕುಲಕ್ಕೆ ಬಹಳಷ್ಟು ಪ್ರಯೋಜನವನ್ನುಂಟು ಮಾಡುತ್ತದೆ. ಆದ್ದರಿಂದಲೇ ಎಲ್ಲಾ ವಿದ್ವತ್ ಸಂಶೋಧನೆಗಳು, ಕ್ಷೇತ್ರಅಧ್ಯಯನಗಳು ಕಂಡುಕೊಂಡ ಸತ್ಯವೆಂದರೆ, "ನೀವು ಹುಡುಗನೊಬ್ಬನಿಗೆ ಶಿಕ್ಷಣ ಕೊಟ್ಟರೆ, ಅದು ವ್ಯಕ್ತಿಗೆ ಕೊಟ್ಟ ಶಿಕ್ಷಣ, ಆದರೆ ಹುಡುಗಿಗೆ ಕೊಡುವ ಶಿಕ್ಷಣ ಇಡೀ ಕುಟುಂಬಕ್ಕೆ, ಅವರ ಸಮುದಾಯಕ್ಕೆ ಕೊಡುವ ಶಿಕ್ಷಣವಾಗುತ್ತದೆ.

ತಾಯಂದಿರಿಗೆ ಕೊಟ್ಟಿರುವ ಶಿಕ್ಷಣ ಅವರ ಮಕ್ಕಳ ಶಿಕ್ಷಣ, ಆರೋಗ್ಯದ ಮೇಲೆ ಗಮನಾರ್ಹ ಪರಿಣಾಮ ಬೀರುತ್ತಿದೆಯೆಂಬ ಅಂಶವು ಈಗ ಸಾಕ್ಷ್ಯಾಧಾರಗಳ ಮೂಲಕ ದೃಢಪಟ್ಟಿವೆ. ವಿದ್ಯಾವಂತ ತಾಯಿಯರ ಮಕ್ಕಳು ಅವಿದ್ಯಾವಂತ ತಾಯಿಯರ ಮಕ್ಕಳಿಗಿಂತ ಹೆಚ್ಚು ಓದಿರುವರು ಮತ್ತು ಅರಿತವರೂ ಆಗಿರುತ್ತಾರೆಂಬುದೂ ಕಂಡು ಬಂದಿದೆ. ಸುಮಾರು ಆರು ವರ್ಷಗಳ ಶಿಕ್ಷಣ ಪಡೆದ ಹುಡುಗಿಯೊಬ್ಬಳು. ಅವಳ ಮಗುವಿಗೆ ಯಾವ ರೀತಿಯ ಮುಂಜಾಗ್ರತ ರೋಗನಿರೋಧಕಗಳನ್ನು ಕೊಡಬೇಕು, ನೈರ್ಮಲ್ಯದ ಬಗೆಗೆ ಕೊಡಬೇಕಾದ ಗಮನ - ಇಂತಹ ವಿಷಯಗಳ ಬಗ್ಗೆ ಜಾಗ್ರತಳಾಗಿರುತ್ತಾಳೆ. ಆಫ್ರಿಕಾದೇಶದಲ್ಲಿನ ಮಾಹಿತಿಯಿದು : ಸುಮಾರು ಆರು ವರ್ಷಗಳ ಕಾಲ ಶಿಕ್ಷಣ ಪಡೆದ ತಾಯಿಯರ ಮಕ್ಕಳ ಜೀವಿತಾವಧಿ, ಅದಕ್ಕಿಂತ ಕಡಿಮೆ ಕಲಿತ ತಾಯಂದಿರ ಮಕ್ಕಳಿಗಿಂತ ಶೇಕಡ ನಲವತ್ತರಷ್ಟು ಹೆಚ್ಚಿದೆ. ಯುನೆಸ್ಕೋದ ಅಧ್ಯಯನ ಯೋಜನೆಯೊಂದು ಕನಿಷ್ಠ ಪ್ರಾಥಮಿಕ ಶಿಕ್ಷಣ ಪಡೆದ ಹೆಂಗಸರಲ್ಲಿ ಶಿಶುಮರಣ ಸಂಖ್ಯೆ ಶೇಕಡ ಹತ್ತರಷ್ಟು ಕಡಿಮೆಯಾಗಿದೆ, ಎಂದು ತಿಳಿಸಿದೆ.

ಭಾರತದಲ್ಲೂ ಇಂತಹ ಅಂಕಿ ಸಂಖ್ಯೆಗಳಿಗೆ ಕಡಿಮೆಯಿಲ್ಲ. ಕಲಿತ ಹುಡುಗಿಯರು ತಡವಾಗಿ ಮದುವೆಯಾಗುವುದನ್ನು ಬಯಸುತ್ತಾರೆ ಮತ್ತು ಕಡಿಮೆ ಮಕ್ಕಳನ್ನು ಹೆರಲು ಇಚ್ಛಿಸುತ್ತಾರೆ. ಆದ್ದರಿಂದಲೇ ನಾಲ್ಕು ವರ್ಷಗಳ ಶಿಕ್ಷಣ ಪಡೆದ ಮಹಿಳೆಯರು ಒಂದರಂತೆ ಕಡಿಮೆ ಮಕ್ಕಳನ್ನು ಹೆರುವರು ಎಂದು ವಿಶ್ವ ಆರೋಗ್ಯ ಸಂಸ್ಥೆಯ ಅಂಕಿ ಸಂಖ್ಯೆಗಳಲ್ಲಿ ದೃಢಪಟ್ಟಿವೆ. ಹೆಂಗಸರ ಫಲವಂತಿಕೆಯ ಯೋಜನೆಗೂ ವಿದ್ಯಾಭ್ಯಾಸಕ್ಕೂ ನೇರ ಸಂಬಂಧವಿದೆ. ಕೇರಳದಲ್ಲಿ ಪ್ರತಿಯೊಬ್ಬ ದಂಪತಿಗಳ ಫಲವಂತಿಕೆಯು ಶೇಕಡ 1.7 ಇದ್ದರೆ ಬಿಹಾರದಲ್ಲಿ ನಾಲ್ಕಕ್ಕಿಂತ ಹೆಚ್ಚಿದೆ ಎನ್ನುವ ಸತ್ಯದ ಹಿಂದೆ ಕೇರಳದ ಮಹಿಳಾ ಸಾಕ್ಷರತೆ ಎದ್ದು ಕಾಣುತ್ತದೆ.

ಹೆಚ್ಚು ಹೆಣ್ಣು ಮಕ್ಕಳು ಪ್ರೌಢಶಾಲಾ ಶಿಕ್ಷಣ ಪಡೆದರೆಂದರೆ ದೇಶದ ಆದಾಯ ರೇಖೆ ಮೇಲೇರುತ್ತದೆ. ವಿದ್ಯಾವಂತ ಹೆಂಗಸರು ಕೃಷಿ ಕಾರ್ಯದಲ್ಲಿ ಎದ್ದು ಕಾಣುವ ಮತ್ತೊಂದು ಗುಣವೆಂದರೆ, ಅವರು ಬೇರೆಯವರಿಂದ ತಕ್ಷಣ ಹೊಸದನ್ನು ಕಲಿಯಲು ಹಾತೊರೆಯುತ್ತಾರೆ. ಆದ್ದರಿಂದ ಕಲಿತ ವಿದ್ಯಾವಂತ ಹೆಂಗಸರ ಜ್ಞಾನ ಸಂಚಯವು ಉಳಿದ ಅವಿದ್ಯಾವಂತ ಹೆಣ್ಣು ಮಕ್ಕಳಿಗೂ ವರ್ಗಾಯಿಸಲ್ಪಡುತ್ತದೆ.

ದುರಂತವೆಂದರೆ ಅನಭಿವೃದ್ಧ ರಾಷ್ಟ್ರಗಳಲ್ಲಿ ಬಹುತೇಕ ಸಂದರ್ಭದಲ್ಲಿ ಅಲ್ಲಿನ ಸರ್ಕಾರಗಳು ಹೆಣ್ಣು ಮಕ್ಕಳ ಶಿಕ್ಷಣವನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸಿಲ್ಲ. ಮಹಿಳಾ ಶಿಕ್ಷಣಕ್ಕೆ ಖರ್ಚು ಮಾಡಲು ಸರ್ಕಾರ ಮನಸ್ಸು ಮಾಡದಿದ್ದರೆ ಅದರ ಫಲವನ್ನು ಇಡೀ ದೇಶದ ಎದುರಿಸಬೇಕಾಗುತ್ತದೆ. ನಾವು ಬಿಹಾರದ ಉದಾಹರಣೆ ಕೊಟ್ಟು 'ನೋಡಿ ವಿದ್ಯೆಯಿಲ್ಲದಿದ್ದರೂ ಮಹಿಳೆಯೊಬ್ಬಳು ಮುಖ್ಯ ಮಂತ್ರಿಯಾಗಬಹುದು' ಎಂದು ಹೇಳಬಹುದು. ಆದರೂ ಬಿಹಾರದ ಮಹಿಳಾ ಸಾಕ್ಷರತೆ ಶೇಕಡ 23ರಷ್ಟಿದೆ ಎಂಬ ಅಂಶವನ್ನು ಗಮನಿಸಿದಾಗ ನಾಚಿಕೆಯಾಗುತ್ತದೆ.

ಆದ್ದರಿಂದ 'ಮಹಿಳಾ ಶಿಕ್ಷಣ'ವೇ ನಮ್ಮ ಎಲ್ಲ ಸಮಸ್ಯೆಗಳತ್ತ ಆಶಾದಾಯಕ ಪರಿಹಾರವಾಗಿ ಕಾಣುತ್ತದೆ.

*ಕೃಪೆ : ದಿ ಹಿಂದೂ*

# ಅನುದಾನ ನೀತಿ ಮತ್ತು ಮಹಿಳಾ ಶಿಕ್ಷಣ

- ಡಾ।। ಎಸ್. ಪಿ. ವಾಗೇಶ್ವರಿ

ಭಾರತದ ಸಂವಿಧಾನದಲ್ಲಿ ನಿರ್ದೇಶಕ ತತ್ವಗಳ ನೀತಿಯ ಅನುಚ್ಛೇದ 45ರಲ್ಲಿ ಸಂವಿಧಾನ ಪ್ರಾರಂಭವಾದ ಕೂಡಲೇ ದೇಶದ ಮಕ್ಕಳಿಗೆ 14 ವರ್ಷಗಳು ತುಂಬುವವರೆಗೆ ಉಚಿತ ಶಿಕ್ಷಣವನ್ನು, ಎಲ್ಲಾ ಮಕ್ಕಳಿಗೆ 10 ವರ್ಷಗಳವರೆಗೆ ನೀಡಬೇಕೆಂದು ನಿಗದಿ ಮಾಡಲಾಗಿದೆ. ಸಂವಿಧಾನಕ್ಕೆ 86ನೇ ತಿದ್ದುಪಡಿ ತಂದು ಮೂಲಭೂತ ಹಕ್ಕುಗಳಲ್ಲಿ ಶಿಕ್ಷಣ ಕೂಡ ಒಂದು ಹಕ್ಕನ್ನಾಗಿ ಮಾಡಲು ಕೇಂದ್ರ ಸರ್ಕಾರದ ರಾಷ್ಟ್ರೀಯ ಶಿಕ್ಷಣ ನೀತಿಯು ಒತ್ತಿ ಹೇಳಿದೆ. ಎಂಟನೇ ಪಂಚವಾರ್ಷಿಕ ಯೋಜನೆಯಲ್ಲಿ ಶಿಕ್ಷಣದ ಮೇಲೆ ಜಿಡಿಪಿಯ ಶೇಕಡ 6ರಷ್ಟು ಹಣವನ್ನು ಖರ್ಚು ಮಾಡಬೇಕೆಂದು ರಾಷ್ಟ್ರೀಯ ಶಿಕ್ಷಣ ನೀತಿ ಕರೆ ನೀಡಿದೆ. ಇಂತಹ ರಾಷ್ಟ್ರೀಯ ಶಿಕ್ಷಣ ನೀತಿ ಮಹಿಳಾ ಶಿಕ್ಷಣ ಹಾಗು ಮಹಿಳಾ ಸಶಕ್ತೀಕರಣಕ್ಕೆ ಪೂರ್ವಭಾವಿಯಾಗುತ್ತದೆ ಎಂದು ನಂಬಲಾಗಿದೆ. ಆದರೆ ಮಹಿಳಾ ಶಿಕ್ಷಣ ಕ್ಷೇತ್ರದ ವಾಸ್ತವವನ್ನು ತೌಲನಿಕವಾಗಿ ಪರಿಶೀಲಿಸಿದಾಗ, ಸಂಪೂರ್ಣವಾದ ಭಿನ್ನ ಪರಿಸ್ಥಿತಿ ಗಣನೆಗೆ ಬರುತ್ತದೆ. ಪ್ರಚಲಿತದಲ್ಲಿರುವ ಈ ಸ್ಥಿತಿ ಮಹಿಳಾ ಶಿಕ್ಷಣದ ಪ್ರಾಥಮಿಕ ಹಂತದಿಂದ ಕಾಲೇಜು ಹಂತದ ಎಲ್ಲಾ ಘಟ್ಟಗಳನ್ನೂ ಒಳಗೊಂಡಿದೆ ಎಂಬುದು ಗಣನೀಯವಾದ ಅಂಶ. ಉದಾಹರಣೆಗೆ 1993ರಲ್ಲಿ ನಡೆಸಿದ ರಾಷ್ಟ್ರೀಯ ಶಿಕ್ಷಣ ಸಮೀಕ್ಷೆಯಂತೆ ಜನಸಂಖ್ಯೆಯ ಶೇ 91ರಷ್ಟು ಜನರಿಗೆ ತಾವು ವಾಸಿಸುವ ಪ್ರದೇಶಗಳಲ್ಲೇ ಒಂದು ಶಾಲೆಯಿದ್ದರೆ, ಶೇ 5ರಷ್ಟು ಜನರು ಶಾಲೆಗಾಗಿ ಕೇವಲ 1 ಕಿ.ಮೀ. ನಡೆಯಬೇಕಾಗಿರುವುದನ್ನು ಸ್ಪಷ್ಟಪಡಿಸುತ್ತದೆ. ಇಂತಹ ಸಂದರ್ಭದಲ್ಲೂ ಕೂಡ ಶಾಲೆಗೆ ಹೋಗದ ಮಕ್ಕಳ ಸಂಖ್ಯೆ ಅದರಲ್ಲೂ ಹೆಣ್ಣು ಮಕ್ಕಳ ಸಂಖ್ಯೆ ಇನ್ನೂ ಹೆಚ್ಚಾಗಿಯೇ ಇದೆ ಎಂಬುದು ಗಮನೀಯ.

2001ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಮಹಿಳೆಯರ ಸಾಕ್ಷರತಾ ದರ ಶೇಕಡ 57.45 ಮತ್ತು ಪುರುಷರ ಸಾಕ್ಷರತಾದರ 76.29 ಇದ್ದು ಸಾಕ್ಷರತಾ ದರದಲ್ಲಿ ಇರುವ ಅಸಮಾನತೆಯನ್ನು ಸ್ಪಷ್ಟಪಡಿಸುತ್ತದೆ. ಈ ಜನಗಣತಿಯ ಪ್ರಕಾರ ರಾಜ್ಯದ ಒಟ್ಟು 2,58,77,615 ಮಹಿಳೆಯರಲ್ಲಿ 1,29,57,306 ಮಹಿಳೆಯರು ಅನಕ್ಷರಸ್ಥರಿರುವುದು ಸಮಸ್ಯೆಯ ಅಗಾಧತೆಯನ್ನು ತೋರಿಸುತ್ತದೆ. ಇದರೊಟ್ಟಿಗೆ ರಾಜ್ಯದ ಸಾಕ್ಷರತಾ ದರ ರಾಷ್ಟ್ರದ ದರಕ್ಕಿಂತ ಹೆಚ್ಚಾಗಿದ್ದರೂ ಸಹ ಕಳೆದ 10 ವರ್ಷಗಳಲ್ಲಿ ರಾಜ್ಯದ ಸಾಕ್ಷರತಾ ದರದಲ್ಲಿ ಗಣನೀಯ ಏರಿಕೆಯಾಗಿಲ್ಲ. ರಾಷ್ಟ್ರದ ಸಾಕ್ಷರತಾ ದರ ಕಳೆದ ದಶಕದಲ್ಲಿ ಶೇ 13ರಷ್ಟು ಹೆಚ್ಚಳವಾಗಿದ್ದರೆ ರಾಜ್ಯದ ಹೆಚ್ಚಳ ಕೇವಲ ಶೇ 11ರಷ್ಟಿದೆ. ಇದು ಪ್ರಾಥಮಿಕ ಶಿಕ್ಷಣದ ಪರಿಸರವಾದರೆ, ಉನ್ನತ ಶಿಕ್ಷಣದ ಪರಿಸ್ಥಿತಿ ಕೂಡ ಅಷ್ಟೇನು ಭಿನ್ನವಾಗಿಲ್ಲ. ಅಂಕಿ ಅಂಶಗಳ ಪ್ರಕಾರ, 1990ರಲ್ಲಿ 15 ಸರ್ಕಾರಿ ಪ್ರಥಮದರ್ಜೆ ಕಾಲೇಜುಗಳು ಮತ್ತು 29 ಖಾಸಗಿ ಅನುದಾನಿತ ಕಾಲೇಜುಗಳಿದ್ದವು. 1997ರಲ್ಲಿ ಒಟ್ಟು ಕಾಲೇಜುಗಳ ಸಂಖ್ಯೆ ರಾಜ್ಯದಲ್ಲಿ 872ಕೆ ಏರಿತು. ಇದು 148 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು, 289 ಖಾಸಗಿ ಅನುದಾನಿತ ಕಾಲೇಜುಗಳು 375 ಖಾಸಗಿ ಅನುದಾನ ರಹಿತ ಕಾಲೇಜುಗಳು ಮತ್ತು 60 ಕಾನೂನು ಕಾಲೇಜುಗಳನ್ನು ಒಳಗೊಂಡಿದೆ. ಕೇವಲ ಒಂದು ಸರ್ಕಾರಿ ಕಾನೂನು ಕಾಲೇಜನ್ನು ಹೊರತುಪಡಿಸಿ, ಎಂಟು ಅನುದಾನರಹಿತ ಸಂಸ್ಥೆಗಳಾದರೆ, ಇತರ 51 ಕಾಲೇಜುಗಳು ಸರ್ಕಾರಿ ಮುಂಗಡ ಪತ್ರದಿಂದ ನೆರವು ಪಡೆಯುತ್ತಿವೆ. ಇವು ಕಾಲೇಜುಗಳ ಸಂಖ್ಯೆಯಾದರೆ, 1996-97ರಲ್ಲಿ ಸಾಮಾನ್ಯ ಶಿಕ್ಷಣ ಒದಗಿಸುವ 821 ಕಾಲೇಜುಗಳಲ್ಲಿ 1.96 ಲಕ್ಷ ಹುಡುಗರು ಮತ್ತು 1.22 ಲಕ್ಷ ಹುಡುಗಿಯರು ನೋಂದಣಿಯಾಗಿದ್ದರು. ಉನ್ನತ ಶಿಕ್ಷಣದಲ್ಲಿ ಮಹಿಳೆಯರ ನೋಂದಣಿ ಪ್ರಮಾಣವು 1965ದಲ್ಲಿ ಶೇಕಡ 13 ಮತ್ತು 1991-92ರಲ್ಲಿ ಶೇಕಡ 29 ಆಗಿತ್ತು. ಸ್ನಾತಕೋತ್ತರ ಮಟ್ಟದಲ್ಲಿ ಈ ಕಾಲಾವಧಿಯಲ್ಲೇ, ಶೇಕಡ 15ರಿಂದ ಶೇಕಡ 31ಕ್ಕೆ ಏರಿತ್ತು. ಹಾಗೆಯೆ ಶೇಕಡ 44.6ರಷ್ಟು ಮಹಿಳೆಯರು ಕಲೆಗಳ ಬೋಧನಾ ವಿಭಾಗದಲ್ಲಿನ ಪದವಿ ಪೂರ್ವ ಮಟ್ಟದಲ್ಲಿ ನೋಂದಣಿಯಾಗಿದ್ದಾರೆ. ಇವೆಲ್ಲ ಅಂಕಿ ಅಂಶಗಳು ಮಹಿಳೆಯರ ನೋಂದಣಿ ಸಾಕಷ್ಟು ಇಲ್ಲ ಎಂಬುದರೊಂದಿಗೆ, ಅದು ವಿಕಲ್ಪವೂ ಆಗಿದೆ, ಎಂಬುದಕ್ಕೆ ನಿದರ್ಶನ ಕೂಡ ಹೌದು. ದೇಶದ ಶಿಕ್ಷಣದ ಮೇಲೆ ಮಾಡಲಾಗುತ್ತಿರುವ ಜಿ.ಎನ್.ಪಿ.ಯ ಶೇಕಡ 3.8ಕ್ಕೆ ಪ್ರತಿಯಾಗಿ, ಕರ್ನಾಟಕವು ತನ್ನ ಜಿ.ಎನ್.ಪಿ.ಯ ಶೇಕಡ 3.2ರಷ್ಟು ಭಾಗವನ್ನು ಮಾತ್ರ ಶಿಕ್ಷಣಕ್ಕೆ ನಿಗದಿಗೊಳಿಸಿದೆ. ಪ್ರತಿ ವಿದ್ಯಾರ್ಥಿಯ ಮೇಲೆ ಸರ್ಕಾರವು ಖರ್ಚು ಮಾಡುತ್ತಿರುವ ತಲಾ ಮೊಬಲಗು ಕೇವಲ ರೂ 77 ಇದೆ. ಹೋಲಿಕೆಯಲ್ಲಿ, ಕೇರಳದ ರೂ 368 ಮಹಾರಾಷ್ಟ್ರದ ರೂ 313, ತಮಿಳುನಾಡಿನ ರೂ. 298ಕ್ಕಿಂತ ಬಹುಪಾಲು ಕೆಳಸ್ತರದಲ್ಲಿದೆ. ತಾಂತ್ರಿಕ ಶಿಕ್ಷಣದಲ್ಲಿ ಕರ್ನಾಟಕ ರಾಜ್ಯವು ಮಹಿಳೆಯರಿಗೆ ಸಂಬಂಧಿಸಿದಂತೆ ಅನೇಕ

ಸುಧಾರಣೆಗೆ ಅನುವು ಮಾಡಿಕೊಟ್ಟಿರುವುದಾದರೂ, ಇರುವ ತಾರತಮ್ಯಗಳ ಇಳಿಮುಖ ಸಂಪೂರ್ಣವಾಗಿಲ್ಲ ಒಟ್ಟು 38 ಸರ್ಕಾರಿ, 7 ಅನುದಾನ ಸಹಿತ ಮತ್ತು 140 ಖಾಸಗಿ ವಲಯದ ಪಾಲಿಟೆಕ್ನಿಕ್ ಸಂಸ್ಥೆಗಳಲ್ಲಿ, ಕ್ರಮವಾಗಿ 6 ಸರ್ಕಾರಿ, 1 ಅನುದಾನ ಸಹಿತ ಮತ್ತು 5 ಪ್ರತ್ಯೇಕ ಮಹಿಳಾ ಪಾಲಿಟೆಕ್ನಿಕ್‌ಗಳಿವೆ. ಉಳಿದ ಪಾಲಿಟೆಕ್ನಿಕ್‌ಗಳಲ್ಲಿ 1996-97ರಿಂದ ಶೇ 30ರ ಮೀಸಲಾತಿಯನ್ನು ಮಹಿಳೆಯರಿಗೆ ಒದಗಿಸಲಾಗಿದೆ. 1999-2000ದಲ್ಲಿ ತಾಂತ್ರಿಕ ಶಿಕ್ಷಣ ಪದವಿಯ ಮೊದಲನೆ ವರ್ಷದ ತರಬೇತಿಗಾಗಿ ದಾಖಲಾದ ವಿದ್ಯಾರ್ಥಿ ಸಂಖ್ಯೆ, ಎಂದರೆ 26292 ವಿದ್ಯಾರ್ಥಿಗಳಲ್ಲಿ ಶೇಕಡ 24.49ರಷ್ಟು ಮಹಿಳೆಯರಿದ್ದರು. ಇಷ್ಟಾದರೂ ರಾಜ್ಯದ ಹಿಂದುಳಿದ ಜಿಲ್ಲೆಗಳಾದ ಚಾಮರಾಜನಗರ ಮತ್ತು ಕೊಪ್ಪಳಗಳ ಪಾಲಿಟೆಕ್ನಿಕ್ ಕಾಲೇಜುಗಳಲ್ಲಿನ ವಿದ್ಯಾರ್ಥಿನಿಯರ ಸಂಖ್ಯೆ ಕೇವಲ 13.

ಮೇಲೆ ಸೂಚಿಸಿರುವ ಅಂಕಿ ಅಂಶಗಳು, ವಿವರಣೆಗಳಿಂದ ಕೆಲವು ಪ್ರಮುಖ ವಿಷಯಗಳು ವೇದ್ಯವಾಗುತ್ತವೆ. ಮೊದಲನೆಯದಾಗಿ, ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿ ಪರಿವರ್ತಿಸಿ, ಆಡಳಿತ ನೀತಿಯ ಅನನ್ಯ ಭಾಗವೆಂದು ಪರಿಗಣಿಸಿದ್ದಾಗ ಕೂಡ, ಶಿಕ್ಷಣ ಕ್ಷೇತ್ರದ ಪರಿಧಿಗೆ ಒಳಗಾಗಿರುವ ಮಹಿಳೆಯರ ಸಂಖ್ಯೆ ಗಣನೀಯವಾಗಿ ಕಡಿಮೆ ಇದೆ. ಎರಡನೆಯದಾಗಿ ಈ ಅಸಮತೋಲನ ರಾಷ್ಟ್ರದ ಸರಾಸರಿಗಿಂತ ರಾಜ್ಯದ ಸರಾಸರಿಯಲ್ಲಿ ಹೆಚ್ಚಿದೆ.

ಅನುದಾನ ನೀತಿ, ಅದರ ಪ್ರಸ್ತುತತೆ ಮತ್ತು ಮುಂದುವರಿಕೆಯ ವಾದ ಹಾಗೂ ಸಂಬಂಧಪಟ್ಟ ನಿಲುವುಗಳನ್ನು ಈ ಹಿನ್ನಲೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ. ಪ್ರಸ್ತುತ ಬೆಲೆಗಳಲ್ಲಿ ಪ್ರತಿ ವಿದ್ಯಾರ್ಥಿಗೆ ಕಾಲೇಜು ಶಿಕ್ಷಣದ ವೆಚ್ಚ ಅಂದಾಜಿನಲ್ಲಿ ರೂ 5330 ಆಗಿದ್ದು, ಈ ವೆಚ್ಚದ ಸುಮಾರು ಶೇಕಡ 90ರಷ್ಟು ಭಾಗ ಸರ್ಕಾರಿ ಹಾಗೂ ಅನುದಾನಿತ ಕಾಲೇಜುಗಳ ಅಧ್ಯಾಪಕರ ವೇತನಗಳಿಗಾಗಿರುವುದರಿಂದ, ಪ್ರಚಲಿತದಲ್ಲಿರುವ ಶೈಕ್ಷಣಿಕ ಗುಣಮಟ್ಟ ಕಡಿಮೆಯಾಗಿ, ಶಿಕ್ಷಣ ಸಂಸ್ಥೆಗಳ ಸಾಮರ್ಥ್ಯ ರಚನೆಗೆ ಕೂಡ ಅತ್ಯಲ್ಪ ಹಣ ವಿನಿಯೋಗವಾಗುತ್ತಿದೆ ಎನ್ನುವುದು ಅನುದಾನ ನೀತಿ ವಿರೋಧಿಗಳ ನಿಲುವು. ಇದು ಅನುದಾನ ನೀತಿಯ ಪದ್ಧತಿಯನ್ನು ಮೂಲಭೂತ ವಿಮರ್ಶೆಗೆ ಎಡೆಮಾಡಿದೆ. ಶಿಕ್ಷಣ ವ್ಯವಸ್ಥೆಯ ಹೊಣೆಗಾರಿಕೆ ಸರ್ಕಾರದ ಅವಿಭಾಜ್ಯ ಅಂಗ ಎನ್ನುವ ನಿಲುವನ್ನು ಪ್ರಶ್ನಿಸುವುದರೊಂದಿಗೆ, ಈ ವಿರೋಧಗಳು ಹಾಗೂ ವಿಮರ್ಶೆಗಳು ಉದ್ಭವಿಸಿವೆ. ಸಾಮಾಜಿಕ ಮತ್ತು ಬೌದ್ಧಿಕ ಧ್ಯೇಯದ ನಿಟ್ಟಿನಿಂದ ಸಮಾಜದ ಇತರೇ ಆರ್ಥಿಕ, ರಾಜಕೀಯ ವಲಯಗಳ ಹಾಗೆ, ಶಿಕ್ಷಣ ಕೂಡ ಒಂದು ಔದ್ಯಮಿಕ ಹಾಗೂ ವಾಣಿಜ್ಯ ಕ್ಷೇತ್ರವಾಗಿ ಪರಿಣಮಿಸಿದೆ. ಈ ರಂಗಗಳಿಗೆ ಅನ್ವಯಿಸುವ ಆರ್ಥಿಕ ನೀತಿಗಳು ಶಿಕ್ಷಣ ಕ್ಷೇತ್ರಕ್ಕೂ ಅನ್ವಯಿಸುತ್ತದೆ. ಹೀಗಾಗಿ ನಷ್ಟ ಭರಿಸುತ್ತಿರುವ ಉದ್ದಿಮೆಗಳನ್ನು ಸರ್ಕಾರಿ ರಕ್ಷಾ ಕವಚದಿಂದ ಹೊರತೆಗೆದು, ಮುಕ್ತ ಮಾರುಕಟ್ಟೆಯಲ್ಲಿ ಬಿಡುತ್ತಿರುವ ಹಾಗೆ ಶಿಕ್ಷಣ ಕ್ಷೇತ್ರವನ್ನು ಕೂಡ ಅನುದಾನ ನೀತಿಯಂತಹ ಸರ್ಕಾರಿ ಆಶ್ರಯದಿಂದ ಬಿಡುಗಡೆ ಮಾಡಬೇಕು. ಇದರಿಂದ ಗುಣಮಟ್ಟ ಕುಸಿದಿರುವ ಶಿಕ್ಷಣ ವ್ಯವಸ್ಥೆ ಸ್ಪರ್ಧಾತ್ಮಕ ಜಗತ್ತಿನಲ್ಲಿ ಉಳಿಯಲೋಸುಗ, ಮಾರುಕಟ್ಟೆ ನಿರೀಕ್ಷಿತ ವಿಷಯಗಳನ್ನು ಅಳವಡಿಸಿಕೊಳ್ಳುತ್ತ, ಇರುವ ವಿಷಯಗಳನ್ನು ವಾಸ್ತವಕ್ಕೆ, ವರ್ತಮಾನಕ್ಕೆ ಪ್ರಸ್ತುತವಾಗುವಂತೆ ಬದಲಾಯಿಸುತ್ತ ವರ್ಧಮಾನಕ್ಕೆ ಬರುತ್ತದೆ. ಅಷ್ಟೇ ಅಲ್ಲದೆ ಖಾಸಗಿ ವಲಯಗಳನ್ನು ಔದ್ಯಮಿಕ ಸಂಸ್ಥೆಗಳನ್ನು ಕೂಡ ಶಿಕ್ಷಣ ವ್ಯವಸ್ಥೆ ಸಹ ಹಾಗೂ ಸಮಭಾಗಿಗಳನ್ನಾಗಿ ಮಾಡಿಕೊಳ್ಳುವ ಸಾಧ್ಯತೆ, ಅನುದಾನ ನೀತಿ ರಹಿತ ವ್ಯವಸ್ಥೆಯಲ್ಲಿ ಹೆಚ್ಚಿದೆ ಎನ್ನುವುದು, ಈ ನೀತಿಯ ವಿರುದ್ಧ ಇರುವ ಪ್ರಮುಖ ನಿಲುವು. ಆದರೆ ವಾಸ್ತವವಾಗಿ ಇದು ಸಾಧ್ಯವೆ? ಅನುದಾನ ನೀತಿಯನ್ನು ಸರ್ಕಾರಿ ಸಬ್ಸಿಡಿ ಎಂದೇ ಒಪ್ಪಿಕೊಳ್ಳುತ್ತ ಅದನ್ನು ವಿಮರ್ಶಿಸಿದಾಗ ವಿಭಿನ್ನ ದೃಷ್ಟಿಕೋನ ಎದುರಾಗುತ್ತದೆ.

ಬಂಡವಾಳಶಾಹಿ ಬುನಾದಿಯನ್ನು ಅನುಮೋದಿಸುವ ಸಾಮಾಜಿಕ ಹಿತಚಿಂತಕರು ಕೂಡ ಸರ್ಕಾರದ ಹೊಣೆಗಾರಿಕೆಯ ವಲಯಗಳನ್ನು ಗುರುತಿಸುತ್ತ 'ಶಿಕ್ಷಣ, ಆರೋಗ್ಯ, ರಾಷ್ಟ್ರ ರಕ್ಷಣೆ' ಇವು ಯಾವುದೇ ಖಾಸಗಿ ಮತ್ತು ಸರ್ಕಾರೇತರ ಸಂಸ್ಥೆಗಳ ಕಾರ್ಯಾಚರಣೆಯ ಕ್ಷೇತ್ರವಾಗುವುದು ಸಾಮಾಜಿಕ ನ್ಯಾಯ ಹಾಗೂ ಸಮತೋಲನ ದೃಷ್ಟಿಯಿಂದ ಸಲ್ಲದು ಎನ್ನುತ್ತಾರೆ. ಈ ನಿಟ್ಟಿನಲ್ಲಿ ಶಿಕ್ಷಣಕ್ಕೆ ಅನುದಾನ ಸರ್ಕಾರದ ವರದಾನವಲ್ಲ ಬದಲಿಗೆ ಅದರ ಮೂಲಭೂತ ಆಡಳಿತ ನಿರ್ವಹಣೆಯ ಜವಾಬ್ದಾರಿ. ಉದಾಹರಣೆಗೆ ಕರ್ನಾಟಕ ರಾಜ್ಯದಲ್ಲಿ ಒಂದು ಲಕ್ಷ ಜನರನ್ನು ಅಕ್ಷರಸ್ಥರನ್ನಾಗಿ ಮಾಡಬೇಕಾದರೆ 50 ರಿಂದ 60 ಲಕ್ಷ ರೂಪಾಯಿ ಖರ್ಚುಭರಿಸಬೇಕು ಎಂಬುದು ಒಂದು ಅಂದಾಜು. ಆದರೆ 2001ರ ಜನಗಣತಿಯ ಪ್ರಕಾರ ರಾಜ್ಯದಲ್ಲಿ ಸುಮಾರು 96 ಲಕ್ಷ ಅನಕ್ಷರಸ್ಥ ಮಹಿಳೆಯರಿದ್ದಾರೆ. ಇಷ್ಟು ಅಗಾಧ ಪ್ರಮಾಣದ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಬೇಕಾದರೆ ರಾಜ್ಯವು 50 ಕೋಟಿ ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ಲಾಭ-ನಷ್ಟಗಳ ತಳಹದಿಯ ಮೇಲೆ ಅಸ್ತಿತ್ವದಲ್ಲಿರುವ ಯಾವ ಖಾಸಗಿ ಅಥವಾ ಔದ್ಯಮಿಕ ಸಂಸ್ಥೆ ಈ ಮೊತ್ತವನ್ನು

ನಿರಪೇಕ್ಷಿತವಾಗಿ ಭರಿಸಲು ಸಿದ್ಧ ಎಂಬುದೊಂದು ಯಕ್ಷಪ್ರಶ್ನೆ. 2000ದ ನಂತರ ಪ್ರಚಲಿತದಲ್ಲಿರುವ ಬಿರ್ಲಾ-ಅಂಬಾನಿ ಯೋಜನೆ ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ವಲಯದ ಭಾಗವಹಿಸುವಿಕೆಯ ಯೋಜನಾ ವರದಿಯಾಗಿದೆ. ಈ ವರದಿಯ ಗರಿಷ್ಠ ಪ್ರಮಾಣದ ಕಳಕಳಿ ಹಾಗೂ ಗುರಿ ಉಚ್ಚಮಟ್ಟದ ತಾಂತ್ರಿಕ ಶಿಕ್ಷಣವೇ ಹೊರತು ಸಾಮಾನ್ಯ ಶಿಕ್ಷಣವಲ್ಲ ಕಲಾ ಮತ್ತು ವಿಜ್ಞಾನಗಳ ಪದವಿ ಪೂರ್ವ ಹಾಗೂ ಸ್ನಾತಕೋತ್ತರ ಶಿಕ್ಷಣದ ಬಗ್ಗೆ ಒಂದೆರಡು ಉಲ್ಲೇಖಗಳು ಮಾತ್ರ ಇವೆ.

ರಾಜ್ಯದಲ್ಲಿ ಕೇವಲ 60 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ತಮ್ಮ ಸ್ವಂತ ಕಟ್ಟಡಗಳನ್ನು ಹೊಂದಿವೆ ಮತ್ತು 57ಕಟ್ಟಡಗಳು ನಿರ್ಮಾಣದ ಹಂತದಲ್ಲಿವೆ. ಆದರೆ ಇವೆಲ್ಲವುದರಲ್ಲೂ ಹೆಣ್ಣು ಮಕ್ಕಳಿಗೆ ಮೂಲ ಸೌಲಭ್ಯವನ್ನು ಒದಗಿಸುವ ವ್ಯವಸ್ಥೆಯೇ ಇಲ್ಲ. ಮಹಿಳಾ ಶಿಕ್ಷಣದ ಮುಖ್ಯ ಸವಾಲುಗಳೆಂದರೆ - ಶಿಕ್ಷಣ ಸಂಸ್ಥೆಗಳು ವಸತಿ ಪ್ರದೇಶಗಳಿಂದ ಬಹು ದೂರದಲ್ಲಿರುವುದು, ಸರಿಯಾದ ಕಟ್ಟಡ, ಕುಡಿಯುವ ನೀರು ಹಾಗೂ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶೌಚಾಲಯವಿಲ್ಲದಿರುವುದು, ಕಾಲಕ್ಕೆ ಅನುಗುಣವಾಗಿ ಶಿಕ್ಷಕರಿಗೆ ಸೂಕ್ತ ಮರು ತರಬೇತಿ ಇಲ್ಲದಿರುವುದು, ಲಿಂಗಭೇದ ನೀತಿ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಶಿಕ್ಷಣಕ್ಕೆ ಭರಿಸಬೇಕಾದ ವೆಚ್ಚ ಅನುದಾನ ನೀತಿಯಡಿಯಲ್ಲಿ ಉದಾಹರಣೆಗೆ ಕರ್ನಾಟಕ ರಾಜ್ಯ ಸರ್ಕಾರ ಹೆಣ್ಣು ಮಕ್ಕಳಿಗೆ ಬೃಹತ್ ಶಿಷ್ಯವೇತನ ಯೋಜನೆಯನ್ನು ಹಮ್ಮಿಕೊಂಡಿದೆ. ಇದಕ್ಕಾಗಿ 2000-01ನೇ ಸಾಲಿನಲ್ಲಿ 65,000 ಗ್ರಾಮೀಣ ಹೆಣ್ಣುಮಕ್ಕಳಿಗೆ ವಾರ್ಷಿಕ ತಲಾ ರೂ 500ರಂತೆ ಶಿಷ್ಯವೇತನ ಸೌಲಭ್ಯವನ್ನು ಕಲ್ಪಿಸಲಾಗಿದೆ. ಇದಲ್ಲದೆ ಹಿಂದುಳಿದ ಜನಾಂಗದ ಹೆಣ್ಣು ಮಕ್ಕಳಿಗೆ ವಾರ್ಷಿಕ ರೂ. 500ರಂತೆ ವಿದ್ಯಾರ್ಥಿವೇತನ ನೀಡುವ ಯೋಜನೆ ಇದೆ. ಶಿಕ್ಷಣ ಸಂಪೂರ್ಣ ಸರ್ಕಾರಿ ಜವಾಬ್ದಾರಿಯಾಗಿ, ಈ ಮೊತ್ತ ವಿದ್ಯಾರ್ಥಿನಿಯರ ಶಿಕ್ಷಣದ ವೆಚ್ಚವನ್ನು ಪೂರ್ಣಪ್ರಮಾಣದಲ್ಲಿ ಭರಿಸುತ್ತಿದ್ದರೂ, ರಾಜ್ಯದ ಅಗಾಧತೆ ಹಾಗೂ ಅನಕ್ಷರಸ್ಥ ಮಹಿಳೆಯರ ಪ್ರಮಾಣದೆದುರು ಈ ವಿದ್ಯಾರ್ಥಿವೇತನ ವ್ಯವಸ್ಥೆ ಅತಿ ಕಡಿಮೆಯೆನಿಸಿದೆ. ಅನುದಾನ ನೀತಿ ರಹಿತ ಶಿಕ್ಷಣ ವ್ಯವಸ್ಥೆಯಲ್ಲಿ ಇಷ್ಟು ಬೃಹತ್ ಪ್ರಮಾಣದ ನೈತಿಕ, ಸಾಮಾಜಿಕ, ಆರ್ಥಿಕ ಬದ್ಧತೆಯನ್ನು ಬೇರಾವ ಸಂಸ್ಥೆಗಳು ನಿರ್ವಹಿಸುತ್ತವೆ? 2001ರ ಜನಗಣತಿಯ ಪ್ರಕಾರ ಸುಮಾರು 23 ಲಕ್ಷ ಹೆಣ್ಣುಮಕ್ಕಳು ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ 10 ಲಕ್ಷ ಹೆಣ್ಣು ಮಕ್ಕಳು ನಗರ ಪ್ರದೇಶದಲ್ಲಿದ್ದಾರೆ. ಇವರನ್ನೆಲ್ಲ ಅಕ್ಷರಸ್ಥರನ್ನಾಗಿ ಮಾಡಲು ಮುಂದಿನ ವರ್ಷಗಳಲ್ಲಿ ಪೂರ್ವ ಪ್ರಾಥಮಿಕ ವೆಚ್ಚವನ್ನೊಳಗೊಂಡಂತೆ ಪ್ರತಿ ವರ್ಷವೂ 13 ಕೋಟಿ ರೂಗಳ ಹೆಚ್ಚಿನ ಮೊತ್ತವನ್ನು ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳ ಶಿಕ್ಷಣಕ್ಕೂ, 6 ಕೋಟಿಗಳನ್ನು ನಗರ ಪ್ರದೇಶಗಳ ಹೆಣ್ಣು ಮಕ್ಕಳ ಶಿಕ್ಷಣಕ್ಕೂ ಖರ್ಚು ಮಾಡಿದರೆ, ರಾಜ್ಯದಲ್ಲಿ ಮಹಿಳಾ ಶಿಕ್ಷಣದ ಹರಹು ಗಮನಾರ್ಹ ರೀತಿಯಲ್ಲಿ ಬದಲಾಯಿಸುತ್ತದೆ. 2002-03ರಲ್ಲಿ 8610 ಕೋಟಿ ರೂ ವಾರ್ಷಿಕ ಯೋಜನೆ ಹಂಚಿಕೆಯಿರುವ ಕರ್ನಾಟಕ ರಾಜ್ಯಕ್ಕೆ ಈ ಹೆಚ್ಚಿನ 19 ಕೋಟಿ ರೂಪಾಯಿಗಳು, ಇದರಿಂದಾಗುವ ಪರಿಣಾಮಕ್ಕೆ ಹೋಲಿಸಿದರೆ ಭಾರವೇನಾಗುವುದಿಲ್ಲ. ಇದಕ್ಕೆ ರಾಜಕೀಯ ಸಂಕಲ್ಪ , ಆಡಳಿತಾತ್ಮಕ ಸಹಾಯದೊಂದಿಗೆ, ಯಾವ ಅಗತ್ಯಗಳನ್ನು ಅತ್ಯಾವಶ್ಯಕ ಎಂದು ನಿರ್ಧರಿಸಬೇಕು. ಸರ್ಕಾರ ಲಿಡಕರ್ ಚರ್ಮದ್ಯೋಗ, ಮಾಡರ್ನ್ ಬೇಕರಿಯಂತಹ ಉದ್ದಿಮೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಪ್ರವೃತ್ತಿಯನ್ನು ಹಿಡಿದು, ಶಿಕ್ಷಣ ಕ್ಷೇತ್ರ ಯಾವುದೇ ವಿನಿಮಯ ವಲಯವಲ್ಲ ಎಂಬುದನ್ನು ಮನಗಂಡಾಗ ಮಾತ್ರ ಅನುದಾನ ನೀತಿ ಕೇವಲ ಆಡಳಿತಾತ್ಮಕ ವಿಷಯವಲ್ಲದೆ ಅದೊಂದು ಸಾಮಾಜಿಕ ಬದ್ಧತೆ ಹಾಗೂ ಕಳಕಳಿ ಎಂದು ಗುರುತಿಸಲು ಶಕ್ಯ.

*(ವಿ.ಸೂ : ಈ ಲೇಖನದಲ್ಲಿ ಬಳಸಿರುವ ಬಹಳಷ್ಟು ಅಂಕಿ ಸಂಖ್ಯೆಗಳು, ಕರ್ನಾಟಕ ಸರ್ಕಾರದ, ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿಯ, ಸೆಪ್ಟೆಂಬರ್ 2002 ವರದಿ ಆಧಾರಿತ.)*

ಕೃಪೆ : ವರ್ಧಿನಿ



**ಸಾಯುತಿವೆ ಹೆಣ್ಣು ಕುಡಿ**
**ಜನಿಸುವ ಮೊದಲೆ**
**ನಶಿಸುತಿದೆ ಸ್ತ್ರೀಕುಲ**
**ವೈದ್ಯರ ಕೈಯಲೆ**

# ಒಗ್ಗೂಡುತ್ತಿರುವ ಮಹಿಳಾ ರಾಜಕಾರಣಿಗಳು

**- ಸುಭಾಸ ಯಾದವಾಡ**

ಕೊಪ್ಪಳ ಜಿಲ್ಲಾ, ನಾರಟಗಿ ಗ್ರಾಮ ಪಂಚಾಯತಿ ಸದಸ್ಯರಾದ ನಾಗಮಣಿ ತ್ರಿಮೂರ್ತಿ ಗಡಿಬಿಡಿಯಲ್ಲಿದ್ದರು. ಮಗಳ ಮದುವೆ ಬೇರೆ! ತುರಾತುರಿ ಇಲ್ಲದೆಯೇ ಇರುತ್ತದಯೇ?

ಅಂದು, ಅವರ ಗಡಿಬಿಡಿಗೆ ಕಾರಣ ಮಗಳ ಮದುವೆ ಅಲ್ಲ.. ಒಕ್ಕೂಟದ ಸಭೆ. ಅದು ಗಂಗಾವತಿ ತಾಲೂಕು ಮಹಿಳಾ ರಾಜಕಾರಣಿಗಳ ಒಕ್ಕೂಟದ ಮೊದಲ ಮೀಟಿಂಗು ; ನಾಗಮಣಿಗೆ, ಈ ಮೀಟಿಂಗೂ ಮಗಳ ಮದುವೆಯಷ್ಟೇ ಮಹತ್ವದ್ದು !

ನಾಗಮಣಿ ಕಾರಟಗಿ ಗ್ರಾಮ ಪಂಚಾಯತಿ ಸದಸ್ಯರು ಮಾತ್ರವಲ್ಲ; ಕೊಪ್ಪಳ ಜಿಲ್ಲಾ ಮಹಿಳಾ ರಾಜಕಾರಣಿಗಳ ಒಕ್ಕೂಟದ ಅಧ್ಯಕ್ಷರೂ ಸಹ. ಜಿಲ್ಲೆಯ ಮಹಿಳಾ ರಾಜಕಾರಣಿಗಳನ್ನು ಒಗ್ಗೂಡಿಸುವುದು. ಅವರ ಸಭೆ ಕರೆಯುವದು... ತಿಳುವಳಿಕೆ ನೀಡುವುದು ಅವರ ಜವಾಬ್ದಾರಿ. ಇದನ್ನೆಲ್ಲ ನಾಗಮಣಿ ಒಬ್ಬರೇ ಮಾಡಬೇಕಾಗಿಲ್ಲ. ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಕಾರ್ಯಕಾರಿ ಮಂಡಳಿ ಎಲ್ಲರೂ ಇದ್ದಾರೆ.

ಕಳೆದ ಕೊಪ್ಪಳ ಜಿಲ್ಲಾ ರಾಜಕಾರಣಿಗಳು ಸಭೆಯಲ್ಲಿ, ತಾಲೂಕಾ ಮಟ್ಟದ ಒಕ್ಕೂಟ ರಚಿಸಲು ತೀರ್ಮಾನಿಸಲಾಗಿತ್ತು. ಆ ತೀರ್ಮಾನದ ಜಾರಿಯ ಮೊದಲ ಹೆಜ್ಜೆಯಾಗಿ, ಗಂಗಾವತಿಯಲ್ಲಿ ಆ ತಾಲೂಕಿನ ಸಭೆಯನ್ನು ಕರೆಯಲಾಗಿತ್ತು. 38 ಜನ ಮಹಿಳಾ ರಾಜಕಾರಣಿಗಳು ತಾಲೂಕಿನ ವಿವಿಧ ಗ್ರಾಮಗಳಿಂದ ಆಗಮಿಸಿದ್ದರು. ಅಂದೇ ಚರ್ಚಿಸಿ ತಾಲೂಕಾಮಟ್ಟದ ಒಕ್ಕೂಟವನ್ನು ರಚಿಸಿಕೊಂಡರು ಅವರಿಗೆಲ್ಲ ನಾಗಮಣಿ ಮಗಳ ಮದುವೆಗೆ ಆಮಂತ್ರಣವನ್ನೂ ಕೊಟ್ಟರು.

ಹೀಗೆ ಮಹಿಳಾ ರಾಜಕಾರಣಿಗಳು ಒಗ್ಗೂಡುತ್ತಿರುವದು ಕೊಪ್ಪಳ ಜಿಲ್ಲೆಯಲ್ಲಿ ಮಾತ್ರವಲ್ಲ, ವಿಜಾಪುರ, ಬೀದರ, ಬಳ್ಳಾರಿ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಲ್ಲೂ ಜಿಲ್ಲಾ ಮಟ್ಟದ ಒಕ್ಕೂಟಗಳ ರಚನೆಯಾಗಿವೆ. ಪ್ರತಿ ಒಕ್ಕೂಟದಲ್ಲೂ ಅಧ್ಯಕ್ಷ, ಉಪಾಧ್ಯಾಕ್ಷ, ಕಾರ್ಯದರ್ಶಿ ಹಾಗೂ ಕಾರ್ಯನಿರ್ವಾಹಕ ಮಂಡಳಿಯನ್ನೊಳಗೊಂಡ ಕಾರ್ಯಪಡೆ ಕಾರ್ಯಪ್ರವೃತ್ತವಾಗಿದೆ.

ಕಳೆದ ಎರಡು ವರ್ಷಗಳಿಂದ ಮಹಿಳೆಯರನ್ನು ಒಗ್ಗೂಡಿಸುವ ಕಾರ್ಯ ನಡೆದಿದ್ದು ; 1027 ಚುನಾಯಿತ ಮಹಿಳಾ ಪ್ರತಿ-ನಿಧಿಗಳನ್ನು ಸಂಪರ್ಕಿಸಲಾಗಿದೆ. ರಾಜ್ಯದ ಏಳು ಜಿಲ್ಲೆಗಳಿಂದ 450 ಜನ ಮಹಿಳಾ ರಾಜಕಾರಣಿಗಳು ಸ್ವತಃ ಆಸಕ್ತಿ ವಹಿಸಿ ಒಕ್ಕೂಟದ ಸದಸ್ಯತ್ವವನ್ನು ಪಡೆದುಕೊಂಡಿದ್ದಾರೆ. ಈ ಒಕ್ಕೂಟದಲ್ಲಿ ಗ್ರಾಮ, ತಾಲೂಕು ಹಾಗೂ ಜಿಲ್ಲಾ ಪಂಚಾಯತಿಗಳಿಗೆ ಆಯ್ಕೆಯಾದ ಮಹಿಳಾ ಪ್ರತಿನಿಧಿಗಳೂ, ಮಾಜಿ ಸದಸ್ಯರೂ ಅಲ್ಲದೇ ರಾಜಕಾರಣದಲ್ಲಿ ಬರಲು ಬಯಸುವ ಭಾವಿ ಮಹಿಳಾ ರಾಜಕಾರಿಣಿಗಳೂ ಇದ್ದಾರೆ.

2003ರಲ್ಲಿ ಆರು ಜಿಲ್ಲೆಗಳ ಒಕ್ಕೂಟದ ಸದಸ್ಯರ ಸಭೆಗಳು ಆಯಾ ಜಿಲ್ಲೆಗಳ ಜಿಲ್ಲಾ ಕೇಂದ್ರದಲ್ಲಿ ಜರುಗಿವೆ. ಸದಸ್ಯರು ತಾಲೂಕಾ ಮಟ್ಟದ ಒಕ್ಕೂಟಗಳನ್ನು ರಚಿಸುವತ್ತ ಒಲವನ್ನು ತೋರಿದ್ದಾರೆ.

ಒಕ್ಕೂಟದ ನಿರಂತರತೆ, ನೀತಿ-ನಿಯಮ ಹಾಗೂ ಕಾರ್ಯನಿರ್ವಹಣೆ ; ಸಂವಿಧಾನದ 73ನೇ ತಿದ್ದುಪಡಿ 11ನೇ ಅಧಿನಿಯಮದನ್ವಯ 29 ಸರಕಾರಿ ಇಲಾಖೆಗಳ ಆಡಳಿತಾಧಿಕಾರವನ್ನು ಗ್ರಾಮ ಪಂಚಾಯತಿಗಳಿಗೆ ವಹಿಸಿ ಕೊಡುವುದು ; ರಾಜಕೀಯ ಪಕ್ಷಗಳ ಚುನಾವಣಾ ಪ್ರಣಾಳಿಕೆಗಳಲ್ಲಿ ಮಹಿಳಾ ಸಂಬಂಧಿ ವಿಷಯಗಳು ; ಮಹಿಳಾ ಜಾಗೃತಿ ಅಭಿಯಾನ ; ಇತರ ಸಂಘ ಸಂಸ್ಥೆಗಳೊಂದಿಗೆ ಸಹಾಯ - ಸಂಪರ್ಕ ಮುಂತಾದ ವಿಷಯಗಳ ಕುರಿತ ಈ ಸಭೆಗಳಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದೆ.

"ಮಹಿಳಾ ರಾಜಕಾರಣಿಗಳನ್ನು ಒಗ್ಗೂಡಿಸುವದೆಂದರೆ ಸುಲಭದ ಮಾತೆ!? 1993ರ ಸಂವಿಧಾನದ 73ನೇ ತಿದ್ದುಪಡಿ ಮೇರೆಗೆ ಪಂಚಾಯತಿಯಲ್ಲಿರುವ ಒಟ್ಟು ಸ್ಥಾನಗಳಲ್ಲಿ 33.3 ಪ್ರತಿಶತ ಮಹಿಳೆಯರಿಗೆ ಮೀಸಲಾತಿ ದೊರೆಯಿತು. ಅದರಲ್ಲಿ ಆರಿಸಿ ಬಂದಿರುವ ಮಹಿಳೆಯರಲ್ಲಿ ಕೆಲವರಿಗೆ ಓದಲು - ಬರೆಯಲು ಬರುವುದಿಲ್ಲ, ಕೆಲವರಿಗೆ ವಯಸ್ಸಾಗಿದೆ ; ಕಣ್ಣು ಕಾಣಿಸುವುದಿಲ್ಲ, ಕಿವಿ ಕೇಳಿಸುವುದಿಲ್ಲ, ಕೆಲವು ಸಮರ್ಥ ಯುವತಿಯರಿಗೆ ಮನೆಯಲ್ಲಿ - ಊರಲ್ಲಿ ಹಲವು ಬಗೆ ದಿಗ್ಬಂಧನೆಗಳು. ಗಂಡ-ಅಂತ್ತೆ-ಮಾವ ಮುಂತಾದವರ ಮನವೊಲಿಸಿ ಮನೆಯಿಂದ ಹೊರಗೆ ಬರಬೇಕು". ಎನ್ನುತ್ತಾರೆ ವಿಜಾಪುರ ಜಿಲ್ಲಾ ಪರಿಷತ್ತಿನ ಮಾಜಿ ಉಪಾಧ್ಯಕ್ಷೆ ಸುಮನ ಕೊಲ್ಹಾರ. ಈಗ ಈ ಯೋಜನೆಯ ಸಂಯೋಜನಕರಾಗಿಯೂ ಸುಮನ್ ಕೆಲಸ ಮಾಡುತ್ತಿದ್ದಾರೆ. ಮಹಿಳೆಯರನ್ನು ಒಗ್ಗೂಡಿಸಲು ರಾಜ್ಯಾದ್ಯಂತ ತಿರುಗಾಡಿದ್ದಾರೆ. ಅಷ್ಟೇ ಅಲ್ಲ, ಮಹಿಳಾ ರಾಜಕಾರಿಣಿಗಳ ಸಂಘಟನೆಗಾಗಿ ಕೇರಳ, ಆಂದ್ರಪ್ರದೇಶ ಹಾಗೂ ತಮಿಳುನಾಡು ರಾಜ್ಯಗಳಲ್ಲೂ ಅವರು ಅಲೆದಿದ್ದಾರೆ.

"ರಾಜಕಾರಣದಲ್ಲಿ ಮಹಿಳೆ ಎದುರಿಸುವ ಸಮಸ್ಯೆಗಳು, ಪುರುಷ ರಾಜಕಾರಿಣಿಗಳು ಎದುರಿಸುವ ಸಮಸ್ಯೆಗಳಿಗಿಂತ ಹಲವು ಹತ್ತು ಪಟ್ಟು ಹೆಚ್ಚು, ಅವುಗಳ ನಿವಾರಣೆ - ನಿರ್ವಹಣೆ ಸಂಕೀರ್ಣವೂ ಕೂಡ. ಅದಕ್ಕಾಗಿ ಮಹಿಳೆಯರು ಒಗ್ಗೂಡುವದು ಅವಶ್ಯ" ಎನ್ನುತ್ತಾರೆ ಸಿಂಗಮ್ಮ ಶ್ರೀನಿವಾಸನ್ ಸಂಸ್ಥೆಯ ನಿರ್ದೇಶಕ ವಿ.ಎಸ್. ಬದರಿ.

ಕಳೆದ ಮೂರು ವರ್ಷಗಳಿಂದ ಸಿಂಗಮ್ಮ ಶ್ರೀನಿವಾಸನ್ ಸಂಸ್ಥೆಯ, ಸ್ತ್ರೀ ಸೂಚನಾ ಸಂಗಮ, ಮಹಿಳಾ ರಾಜಕಾರಿಣಿಗಳನ್ನು ಒಗ್ಗೂಡಿಸುವ ಚಟುವಟಿಕೆಯಲ್ಲಿ ಸಕ್ರಿಯವಾಗಿದೆ. ಈ ವರ್ಷ ಉತ್ತರ ಕರ್ನಾಟಕದ ವಿಜಾಪುರದಲ್ಲಿ ಕರ್ನಾಟಕ ರಾಜ್ಯ ಪ್ರಾದೇಶಿಕ ಕಾರ್ಯಾಲಯವನ್ನು ತೆರೆದು ಈ ಕಾರ್ಯಕ್ಕೆ ವಿಶೇಷ ಒತ್ತು ನೀಡಿದೆ.

ಒಕ್ಕೂಟದ ಅನೇಕ ಸಭೆಗಳಲ್ಲಿ ಭಾಗವಹಿಸಿದ ರಾಯಚೂರು ಜಿಲ್ಲಾ ನವಲಕೋಲ ಗ್ರಾಮ ಪಂಚಾಯತಿಯ ಸದಸ್ಯೆ ರಂಗಮ್ಮ, "ಈಗ ನಾಂವು ಆಟದ ಗೊಂಬಿ ತರಾ ಕುಂದ್ರುದಿಲ್ರಿ. ಗಟ್ಟ್ಯಾಗಿ ಮಾತಾಡಿ ನ್ಯಾಯಾ ಕೇಳತೇವ್ರಿ. ಯಾರು ಏನ ಹೇಳಿದ್ರೂ ಹಿಂದ ಸರಿಯಾದಿಲ್ರಿ" ಎನ್ನುತ್ತಾರೆ.

"ಹತ್ತು ಜುಟ್ಟು ಸೇರಬಹುದು - ಎರಡು ಜಡೆ ಸೇರಲಾರವು" ಎಂಬ ಹಳೆ ಗಾದೆಯನ್ನು ಅನೇಕ ಮಹಿಳಾ ಸಂಘಟನೆಗಳು ಹುಸಿಗೊಳಿಸಿವೆ. ಅವುಗಳಲ್ಲಿ ಮಹಿಳಾ ರಾಜಕಾರಣಿಗಳ ಒಕ್ಕೂಟದ ಸಾಧನೆ ವಿಶಿಷ್ಟವಾದದ್ದು.

★

# ವಿಶ್ವ ಮಾನವ ವರ್ಷ 2003-2004

## ರಾಷ್ಟ್ರಕವಿ ಕುವೆಂಪು ಜನ್ಮ ಶತಮಾನೋತ್ಸವ

## ಜಯ ಭಾರತ ಜನನಿಯ ತನುಜಾತೆ,
## ಜಯಹೇ ಕರ್ನಾಟಕ ಮಾತೆ

## 'ಮನುಜ ಮತ ವಿಶ್ವಪಥ'
## ಕುವೆಂಪು ಅವರ ವಿಶ್ವಮಾನವ ಸಂದೇಶ.

ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ (ಕುವೆಂಪು) ಕನ್ನಡ ಸಾರಸ್ವತ ಲೋಕದ ಧ್ರುವತಾರೆ. ರಾಷ್ಟ್ರಕವಿ. ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮ ವಿಶಿಷ್ಟ ಛಾಪು ಮೂಡಿಸಿ, ಆಧುನಿಕ ಕನ್ನಡ ಪರಂಪರೆಗೆ ನಾಂದಿ ಹಾಡಿದ ಮಾರ್ಗ ಪ್ರವರ್ತಕ. ಮಾನವತಾ ಪರಂಪರೆಯ ಉತ್ತುಂಗ ಕವಿ.

ಬುದ್ಧ, ಬಸವ, ಅಂಬೇಡ್ಕರ್ ಅವರ ಸಮಾಜ ಸುಧಾರಣಾ ಸಂದೇಶವನ್ನು ಸಾಹಿತ್ಯದ ಚೌಕಟ್ಟಿನಲ್ಲಿ ಅನಾವರಣಗೊಳಿಸಿದ ವಿಚಾರವಾದಿ, ಸಮತಾವಾದಿ. ತಮ್ಮ ಆತ್ಮಸಾಕ್ಷಿಗೆ ವಿರುದ್ಧವಾದ ಯಾವುದೇ ಸಂದರ್ಭದಲ್ಲೂ ರಾಜಿಯಾಗದೆ ವೈರುಧ್ಯಗಳನ್ನು ಮೆಟ್ಟಿನಿಂತ ನಿಷ್ಠುರವಾದಿ. ಸಮಾಜ ಸುಧಾರಣೆಗೆ ಅವಿರತ ಸಾಹಿತ್ಯ ಕೃಷಿಗೈದ ಮಾರ್ಗದರ್ಶಕ.

ರಾಷ್ಟ್ರ ಸಾಹಿತ್ಯಲೋಕದ ಅತ್ಯುನ್ನತವಾದ 'ಜ್ಞಾನಪೀಠ ಪ್ರಶಸ್ತಿ' ಪಡೆದ ಕನ್ನಡದ ಪ್ರಥಮ ಕವಿವರ್ಯ ; ಕನ್ನಡ ನಾಡಿನ ಮಹೋನ್ನತವಾದ "ಪಂಪ ಪ್ರಶಸ್ತಿ". "ಕರ್ನಾಟಕ ರತ್ನ" ಪುರಸ್ಕಾರ ಪಡೆದ ಕವಿ ವರೇಣ್ಯ.

ಕನ್ನಡ ನಾಡು, ನುಡಿ ಮತ್ತು ಜನರ ಪುರೋಭಿವೃದ್ಧಿಗೆ ಸಾಹಿತ್ಯದ ಮೂಲಕ ಕುವೆಂಪುರವರು ಪಡಿಮೂಡಿಸಿದ ವಿಚಾರ ಕ್ರಾಂತಿ ಅತ್ಯಪೂರ್ವವಾದದು.

ಜಾತಿ ಮತ ಧರ್ಮದ ಸಂಕೋಲೆಯನ್ನು ಕಿತ್ತೊಗೆದು, ಗುಡಿ, ಗೋಪುರ, ಚರ್ಚು, ಮಸೀದಿಗಳನ್ನು ಬಿಟ್ಟು ಹೊರಬನ್ನಿ! - ಇದು ಕುವೆಂಪು ಅವರು ವಿಚಾರ ಕ್ರಾಂತಿಗೆ ನೀಡಿದ ಆಹ್ವಾನ. 'ಮನುಜ ಮತ ವಿಶ್ವಪಥ' ಅವರ ವಿಶ್ವಮಾನವ ಸಂದೇಶ.

ಮಾನವೀಯ ಮೌಲ್ಯಗಳ ಮೇರುಶಿಖರ. ವಿಶ್ವಮಾನವತೆಯ ಪರಮ ಪ್ರತಿನಿಧಿ. ದಾರ್ಶನಿಕ ಕವಿ ಕುವೆಂಪು ಅವರ ಬದುಕಿನ ಆಶಯಗಳನ್ನು ಮನನ ಮಾಡುತ್ತಾ ನಮ್ಮ ಬದುಕಿನಲ್ಲಿ ವಿಶ್ವಮಾನವ ಸಂದೇಶ ಅಳವಡಿಸಿಕೊಳ್ಳುವುದೇ ನಾಡಿನ ಹೆಮ್ಮೆಯ ಪ್ರತೀಕ. ರಾಷ್ಟ್ರಕವಿ ಕುವೆಂಪು ಅವರಿಗೆ ಸಲ್ಲಿಸುವ ಪರಮೋಚ್ಚ ಗೌರವ.

***ಕರ್ನಾಟಕ ವಾರ್ತೆ***

# ಅಮೇರಿಕಾ ಬಗ್ಗೆ ಕೆಲವು ಮಿಥ್ಯಾ ಸ್ಫೋಟ

**- ಸುಮಾ ರಾಜಶೇಖರ್**

ಅಮೆರಿಕಾಕ್ಕೆ ಬಂಸ ಹೊಸತರಲ್ಲಿ ಅಮೆರಿಕಾದ ಬಗ್ಗೆ ನನ್ನಲ್ಲಿ ಮೂಡಿದ ಅಭಿಪ್ರಾಯಗಳು ಮಾನವರ ಸಹಜ ಪ್ರಕೃತಿ ಮತ್ತು ವರ್ತನೆಯ ಬಗ್ಗೆ ಮತ್ತೆ ಮತ್ತೆ ಮೆಲುಕು ಹಾಕುವಂತೆ ಮಾಡಿವೆ. ಅಮೆರಿಕಾ ವಿಶ್ವದಲ್ಲಿಯೇ ಅತ್ಯಂತ ಮುಂದುವರಿದ ರಾಷ್ಟ್ರ ಎಂದೆನ್ನಿಸಿಕೊಂಡಿದ್ದರಿಂದ ಇಲ್ಲಿಗೆ ಬರುವ ಮುಂಚೆ ಇಲ್ಲಿನ ಸಮಾಜದ ಬಗ್ಗೆ ಭಿನ್ನವಾಗಿಯೇ ಊಹಿಸಿಕೊಂಡಿದ್ದೆ. ಅಮೆರಿಕಾ ಎನ್ನುವುದು 'ಹಾಲು ಮತ್ತು ಜೇನಿನ ನಾಡು' ಎಂದೂ ಸಹ ನಾನು ಕೇಳಿದ್ದೆ. ಆದರೆ, ಇಲ್ಲಿನ ಸಮಾಜದಲ್ಲಿಯೂ ಬಹಳಷ್ಟು ಮಂದಿ ಮಹಿಳೆಯರ ವಿದ್ಯಾರ್ಹತೆ ಪುರುಷರಿಗೆ ಸರಿಸಮನಾಗಿಲ್ಲ ; ಪುರುಷರಿಗೆ ಸಮಾನರಾಗಿ ಮಹಿಳೆಯರನ್ನು ಪರಿಗಣಿಸುವುದೂ ಇಲ್ಲ ಎಂಬುದು ತಿಳಿದುಬಂದಾಗ ನನಗೆ ತಕ್ಷಣ ಒಂದು ರೀತಿ ಆಘಾತವೇ ಆಯಿತು. ನನಗೆ ತಕ್ಷಣ ಅನ್ನಿಸಿದ್ದೇನೆಂದರೆ - ಓಹ್, ಇಲ್ಲಿಯೂ ಸಹ ಭಾರತದಲ್ಲಿರುವಂತೆಯೇ ! ಭಾರತದಲ್ಲಾದರೋ, ಕಡೆಯ ಪಕ್ಷ ಮಹಿಳೆಯರಿಗೆ ಕುಟುಂಬದವರ ಬೆಂಬಲವಾದರೂ ಇದ್ದೇ ಇರುತ್ತದೆ. ಆದರೆ ಇಲ್ಲಿ ಹೆಚ್ಚು ಮಂದಿ ಅಷ್ಟು ಅದೃಷ್ಟವಂತರಲ್ಲ. ಭಾವನಾತ್ಮಕ ಬೆಂಬಲಕ್ಕಾಗಿ ಅವರು ಸ್ನೇಹಿತರನ್ನೇ ಅವಲಂಬಿಸಬೇಕು. ಪ್ರಾಯಶಃ ಇದು ಅವರೆಲ್ಲಿ ಮತ್ತಷ್ಟು ಅಭದ್ರತೆಯ ಹಾಗೂ ಏಕಾಂಗಿತನದ ಭಾವನೆಯನ್ನು ಮೂಡಿಸುತ್ತದೆ.

ನಂತರದ ವರ್ಷಗಳಲ್ಲಿ ಇಲ್ಲಿನ ಮಹಿಳಾ ಚಳುವಳಿಯ ಇತಿಹಾಸದ ಬಗ್ಗೆ ಒಂದಿಷ್ಟು ಮಾಹಿತಿಯನ್ನು ಕಲೆ ಹಾಕುವುದು ನನಗೆ ಸಾಧ್ಯವಾಗಿದೆ. ಓಟು ಹಾಕುವುದು, ವೈದ್ಯಕೀಯ ಮುಂತಾದ ಪುರುಷ ಪ್ರಧಾನ ಕ್ಷೇತ್ರಗಳಲ್ಲಿ ಕಲಿಕೆ, ಚರ್ಚಿನ ನಂಬಿಕೆಗಳಿಗೆ ವಿರುದ್ಧವಾಗಿ ಜನನ ನಿಯಂತ್ರಕಗಳ ಬಳಕೆಯ ಹಕ್ಕು ಮುಂತಾದ ಮೂಲಭೂತ ಹಕ್ಕುಗಳನ್ನು ಪಡೆಯಲು ಇಲ್ಲಿನ ಮಹಿಳೆಯರು ಸಾಕಷ್ಟು ಹೆಣಗಾಡಬೇಕಾಯಿತು. ಭಾರತೀಯ ಮಹಿಳೆಯರಿಗಾದರೋ, ಇವು ಆರಂಭದಲ್ಲಿಯೇ ಹೆಚ್ಚು ಕಷ್ಟವಿಲ್ಲದೆ ದೊರಕಿತು. ನನ್ನ ಗಮನಕ್ಕೆ ಬಂದ ಈ ಅಂಶಗಳಲ್ಲಿ ಕೆಲವು ಒಳಗೊಳಗೇ ನನ್ನ ಮೇಲೆ ಪ್ರಭಾವ ಬೀರಿದರೆ ಕೆಲವು ಓರ್ವ ಮಹಿಳೆಯ ದೃಷ್ಟಿಕೋನದಿಂದ ನನ್ನನ್ನು ಚಿಂತೆಗೀಡು ಮಾಡಿತು. ನಾನು ಗಮನಿಸಿದ ಒಂದು ಅಂಶವೆಂದರೆ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಗಣಿತ ಅಥವಾ ವಿಜ್ಞಾನನ್ನೂ ಮುಖ್ಯ ವಿಷಯಗಳನ್ನಾಗಿ ಕಲಿಯದಿರುವುದು. ನಾನು ಭೇಟಿ ಮಾಡಿದವರ ಪೈಕಿ ಬಹಳಷ್ಟು ಮಂದಿಗೆ ಇದು 'ಗೈಥಿಂಗ್' ಅರ್ಥಾತ್ ಪುರುಷರ ವಿಷಯ ವಸ್ತು. "ಅರೆ, ನೀವು ವಿಜ್ಞಾನದ ಪದವೀಧರರು. ಅಂದರೆ, ನೀವು ನಿಜಕ್ಕೂ ಬಹಳ ಬುದ್ಧಿವಂತರಿರಬೇಕು" ಎಂದು ಅವರು ನನಗೆ ಹೇಳುತ್ತಾರೆ. "ಅದರಲ್ಲೇನು - ಭಾರತದಲ್ಲಿ ಸಾಕಷ್ಟು ಹುಡುಗಿಯರು ವಿಜ್ಞಾನವನ್ನೇ ಓದುತ್ತಾರೆ" ಎಂದು ನಾನು ಹೇಳಿದಾಗಲೆಲ್ಲ ಈ ರೀತಿಯ ಪ್ರತಿಕ್ರಿಯೆಗಳನ್ನು ಕೇಳಿದ್ದೇನೆ. "ಓ, ಹಾಗಾದರೆ ಭಾರತೀಯ ಹುಡುಗಿಯರು ಬುದ್ಧಿವಂತರಿರಬೇಕು, ಇಲ್ಲಂತೂ ಹುಡುಗಿಯರು ವಿಜ್ಞಾನವನ್ನು ಓದುವುದಿಲ್ಲ' ಅಥವಾ 'ನಾನೂ ಅದನ್ನು ಗಮನಿಸಿದ್ದೇನೆ. ಇಲ್ಲಿ ಆ ತರಹ ಇಲ್ಲ'. ನಾನು ಈ ಬಗ್ಗೆ ಇತರ ಭಾರತೀಯ ಮಹಿಳೆಯರೊಂದಿಗೆ ಮಾತನಾಡಿದೆ. ಅವರ ಅನುಭವವೂ ನನ್ನದೇ ಆಗಿತ್ತು. ನಾನು ಕೆಲವು ಅಮೆರಿಕನ್ ಮಹಿಳೆಯರೊಂದಿಗೆ ಈ ಭಿನ್ನತೆಯ ಬಗ್ಗೆ ವಿಚಾರಿಸಿದಾಗ ಅವರಿಂದ ಬಂದ ಪ್ರತಿಕ್ರಿಯೆಗಳು ಹೀಗಿದ್ದವು - 'ಹುಡುಗಿಯರು ಬುದ್ಧಿವಂತರಾಗಿದ್ದರೆ ಹುಡುಗರು ಅವರನ್ನು 'ಡೇಟ್' ಮಾಡುವುದಿಲ್ಲ. ಆದ್ದರಿಂದಲೇ ತರುಣಿಯರು ಕಲಿಕೆಯ ವರ್ಷಗಳಲ್ಲಿ ಇದಕ್ಕೆ ಹೆಚ್ಚು ಮಹತ್ವ ಕೊಡುವುದಿಲ್ಲ. ಆದರೆ ಆನಂತರ ಇದನ್ನು ಮೇಕ್ ಅಪ್ ಮಾಡುವುದು ದುಸ್ತರ "ಗಣಿತ ಕೇವಲ ಪುರುಷರ ವಿಷಯ ಎಂದೇ ನನ್ನ ಅನಿಸಿಕೆಯಾಗಿತ್ತು" ಇತ್ಯಾದಿ. ಈ ಪ್ರತಿಕ್ರಿಯೆಗಳು ನನಗೆ ಕಿರಿಕಿರಿ ಉಂಟು ಮಾಡುತ್ತಿದ್ದವು. ಈಗಲೂ ಮಾಡುತ್ತದೆ ; ಏಕೆಂದರೆ ಈ ರೀತಿ ಹೇಳಿದವರೆಲ್ಲ ನೀವು ಬಹಳ ಬುದ್ಧಿವಂತರಿದ್ದೀರಿ ಎಂದೂ ಸಹ ನನಗೆ ಹೇಳಿದ್ದಾರೆ. ಅಂದರೆ, ಬುದ್ಧಿವಂತರಾಗಿರುವುದೆಂದರೆ ಅದು ಪುರುಷರು ಮಾತ್ರ. ಇಂದಿನ ಯುಗದ / ಪ್ರಾಯದವರ ಮಹಿಳೆಯರಿಗೆ ಹೀಗೆ ಹೇಳಿದರೆ ಅದು ಸ್ವ-ಉನ್ನತಿಯ ಮಾರ್ಗದಲ್ಲಿ ಒಂದು ಹೆಜ್ಜೆ ಹಿಂದಕ್ಕೆ ಹಾಕಿದಂತೆ. ಈ ವಿಷಯದ ಕುರಿತಾಗಿ ಕೆಲವು ಮಧ್ಯವಯಸ್ಕ ಮಹಿಳೆಯರು ಹೇಳಿದ ಮಾತುಗಳನ್ನು ನಾನಿಲ್ಲಿ ಹೇಳಲಿಚ್ಛಿಸುತ್ತೇನೆ - "ಒಳ್ಳೆಯ ಶಿಕ್ಷಣ ಎಷ್ಟು ಮಹತ್ವದ್ದು ಎಂದು ನನಗೇ ಗೊತ್ತಿದ್ದರೆ / ನನಗೆ ಯಾರಾದರೂ ಹೇಳಿದ್ದಿದ್ದರೆ, ನಾನು 18ರ ವಯಸ್ಸಿನಲ್ಲೆ ಗರ್ಭಿಣಿಯಾಗುತ್ತಿರಲಿಲ್ಲ" ಹೈಸ್ಕೂಲು ಓದು ಮುಗಿಸಿದ ನಂತರ ನನ್ನ ಮದುವೆಯಾಯಿತು. ಕುಟುಂಬಕ್ಕಾಗಿ ದುಡಿದು ತರುವುದು ಕೇವಲ ಪುರುಷರ ಕೆಲಸ ಎಂದೇ ನಾನು ಯಾವಾಗಲೂ ಭಾವಿಸಿದ್ದೆ. ಗೊತ್ತಲ್ಲ ನಾವು ಬೆಳೆದು ಬಂದದ್ದೇ ಆ ರೀತಿಯ ಚಿಂತನೆಯ ಮಾರ್ಗದಲ್ಲಿ. ಅನೇಕ ಮಂದಿ ಮಹಿಳೆಯರು ಅದೇ ಧೋರಣೆಯಲ್ಲೇ ಬೆಳೆದು ಬಂದಿರುತ್ತಾರೆ. ಅದು ಎಷ್ಟು ತಪ್ಪು ಎಂಬುದು ನನಗೆ ತಿಳಿದು ಬಂದದ್ದು ವಿಚ್ಛೇದನದ ನಂತರವೇ ನಾನು ಶಾಲೆಯಲ್ಲಿ ಓದುತ್ತಿದ್ದಾಗಲೇ ಮತ್ತಷ್ಟು ತಿಳಿದುಕೊಂಡಿದ್ದರೆ ಚೆನ್ನಾಗಿರುತ್ತಿತ್ತು ಎಂದು ಅನ್ನಿಸುತ್ತದೆ. ಈಗ ಮಕ್ಕಳನ್ನಿಟ್ಟುಕೊಂಡು, ನೌಕರಿ ಇಟ್ಟುಕೊಂಡು ಓದುವುದೆಂದರೆ ಬಹಳ ಕಷ್ಟ. ಎಪ್ಪತ್ತರ

ದಶಕದ ಇವರನ್ನೆಲ್ಲ ಭೇಟಿಯಾಗುವವರೆಗೂ ವರ್ಷಗಳ ಮಹಿಳೆಯರಲ್ಲಿ ಮಾತ್ರ ಇಂತಹ ಅಭಿಪ್ರಾಯಗಳಿರುತ್ತವೆ ಎಂದೇ ನಾನು ಯಾವಾಗಲೂ ಭಾವಿಸಿದ್ದೆ. ಪ್ರಾಮಾಣಿಕವಾಗಿ ಹೇಳಬೇಕೆಂದರೆ, ಇಂದು ಭಾರತದ ನಗರ ವಾಸಿಗಳಿಗೆ ಮಾತ್ರ ತಮ್ಮ ಹೆಣ್ಣು ಮಕ್ಕಳನ್ನು ಬೆಳೆಸುವ ಬಗ್ಗೆ ಅತ್ಯಂತ ಆಧುನಿಕ ಮನೋಭಾವವಿದೆ ಎಂದು ನನಗನ್ನಿಸುತ್ತದೆ.

ಇನ್ನೂ ವಿಚ್ಛೇದನ ಹಾಗೂ ಜೀವನಾಂಶದ ವಿಷಯಕ್ಕೆ ಬಂದಾಗ, ಆ ಬಗ್ಗೆ ನಾನು ಮೊತ್ತ ಮೊದಲು ತಿಳಿದುಕೊಂಡಾಗ, ಅಮೆರಿಕನ್ ಮಹಿಳೆಯರು ಈ ವಿಷಯದಲ್ಲಿ ನಿಜಕ್ಕೂ ಅದೃಷ್ಟಶಾಲಿಗಳು ಎಂದು ನಾನು ಅಂದುಕೊಂಡೆ. ಏಕೆಂದರೆ ಅಲ್ಲಿ ಮಕ್ಕಳನ್ನೂ ಅವರ ತಾಯಂದಿರ ಸುಪರ್ದಿಗೆ ಕೊಡುತ್ತಾರೆ ಹಾಗೂ ತಂದೆ ಅವರಿಗೆ ಜೀವನಾಂಶ ಕೊಡಬೇಕು. ಎಪ್ಪತ್ತರ ದಶಕದಲ್ಲಿ ಹಾಗೂ ಎಂಬತ್ತರ ದಶಕದ ಆರಂಭದವರೆಗೂ ಅದು ವಸ್ತುಸ್ಥಿತಿಯಾಗಿತ್ತು. ಆದರೆ ಮಹಿಳೆಯರು ಪುರುಷ ಪ್ರಾಧ್ಯಾನ್ಯ ಕ್ಷೇತ್ರಗಳಲ್ಲಿ ಕೆಲಸ ಮಾಡತೊಡಗಿದಾಗಿನಿಂದ ಜೀವನಾಂಶದ ನಿಯಮಗಳು ಬದಲಾಗಿವೆ. ಸಾಮುದಾಯಿಕ ಶಿಕ್ಷಣ ಸಂಸ್ಥೆಗೆ ಹೋಗಿದ್ದರಿಂದ ಮಕ್ಕಳನ್ನೂ ಉಳ್ಳ ಅನೇಕ ಮಧ್ಯವಯಸ್ಕ ಒಂಟಿ ಮಹಿಳೆಯರನ್ನೂ ಭೇಟಿ ಮಾಡುವ ಅವಕಾಶಗಳು ನನಗೆ ಒದಗಿಬಂದವು. ವಿಚ್ಛೇದನದ ನಂತರವೂ ಬದುಕು ಸುಲಭವೇನಲ್ಲ, ಅದೂ ಒಳ್ಳೆಯ ಶಿಕ್ಷಣವೆನ್ನುವುದು ಇಲ್ಲದಿದ್ದರೆ ಎಂಬ ಅಂಶವನ್ನು ಇವರೊಂದಿಗೆ ನಡೆಸಿದ ಮಾತುಕತೆಯ ನಂತರ ನಾನು ಗ್ರಹಿಸಿದೆ. ಮಕ್ಕಳುಳ್ಳ ಒಂದಿಬ್ಬರು ವಿಚ್ಛೇದಿತ ಮಹಿಳೆಯರು ತಮ್ಮ ಕುಟುಂಬ ಹಾಗೂ ಶಿಕ್ಷಣವನ್ನು ತೂಗಿಸಲು ಎರಡೆರಡು ಕೆಲಸ ಮಾಡಬೇಕಿತ್ತು. ಶಿಕ್ಷಣವೇಕೆ ಅಂದರೆ ಅದಿಲ್ಲದೇ ಇನ್ನೂ ಉತ್ತಮ ಕೆಲಸ ಸಿಗುವ ಸಾಧ್ಯತೆ ಇಲ್ಲವಲ್ಲ! ನ್ಯಾಯಾಲಯದ ಆದೇಶವಿದ್ದಾಗ್ಯೂ ತನ್ನ ಮಾಜಿ ಪತಿ ತನಗೇನೂ ಜೀವನಾಂಶ ಕೊಡುತ್ತಿಲ್ಲವೆಂದು ಒಬ್ಬಾಕೆ ನನಗೆ ಹೇಳಿದಳು! ಈಗ ಅವಳು ಮತ್ತೆ ನ್ಯಾಯಾಲಯಕ್ಕೆ ಹೋಗಬೇಕೆಂದರೆ, ಮಕ್ಕಳನ್ನು 'ಡೇಕೇರ್' ಕೇಂದ್ರದಲ್ಲಿ ಬಿಟ್ಟು, ರಜೆ ತೆಗೆದುಕೊಳ್ಳಬೇಕು. ಇದು ಅವಳಿಂದ ಸುತರಾಂ ಸಾಧ್ಯವಿಲ್ಲ.

ನನ್ನ ಮಾಜಿ ಪತಿಗೆ ಗಳಿಕೆಯೇನೂ ಅಷ್ಟು ಚೆನ್ನಾಗಿಲ್ಲ, ಅದರಲ್ಲೇ ಒಂದು ಭಾಗವನ್ನು ಮಕ್ಕಳಿಗೆ ಕೊಡಬೇಕು. ಅದು ಒಂದು ಮಗುವನ್ನು ಸಾಕಲಿಕ್ಕೂ ಸಾಲದು. ನನಗೋ ಇಬ್ಬರು ಮಕ್ಕಳು ಅವರನ್ನು ಬೆಳೆಸಲು ಮತ್ತು ನಾನೂ ಕಲಿಯಲಿಕ್ಕೆ ನಾನು ದುಡಿಯಲೇಬೇಕು ಎಂದು ಮತ್ತೊಬ್ಬಾಕೆ ಹೇಳಿದಳು. ಒಳ್ಳೆಯ ಕೆಲಸ ಪಡೆಯುವ ಉದ್ದೇಶದಿಂದ ಈ ಮಹಿಳೆಯರು ಅಸೋಸಿಯೇಟ್ ಡಿಗ್ರಿ (ನಮ್ಮಲ್ಲಿ 'ಡಿಪ್ಲೊಮಾ'ರೀತಿ) ಶಿಕ್ಷಣ ಪಡೆಯುತ್ತಿದ್ದರು.

ಈ ಮಹಿಳೆಯರನ್ನು ಭೇಟಿ ಮಾಡಿದ ನಂತರ, ನ್ಯಾಯಾಲಯದ ಆದೇಶವಿದ್ದಾಗ್ಯೂ ಕೂಡ, ಪುರುಷರು ಮಾಜಿ ಪತ್ನಿಯರೊಟ್ಟಿಗಿರುವ ತಮ್ಮ ಮಕ್ಕಳಿಗೆ ಜೀವನಾಂಶ ಕೊಡುವಂತೆ ಮಾಡುವುದು ಎಷ್ಟು ಕಷ್ಟ ಎಂಬ ಬಗ್ಗೆ ಸ್ಥಳೀಯ ಪತ್ರಿಕೆಯೊಂದರಲ್ಲಿ ಒಂದು ಲೇಖನವನ್ನೂ ಓದಿದೆ. ಕೆಳ ಆರ್ಥಿಕ ವರ್ಗಕ್ಕೆ ಸೇರಿದ ಅನೇಕ ಮಂದಿ ಮಹಿಳೆಯರು ಇಂತಹ ಪ್ರಕರಣಗಳಲ್ಲಿ ಸಿಲುಕಿಕೊಂಡು ನರಳುತ್ತಾರೆ. ಆ ದಿನಗಳಲ್ಲಿ ಸಮಾಜ ಸೇವೆಯಲ್ಲೂ ತೊಡಗಿದ್ದ ಪರಿಚಿತ ಭಾರತೀಯರೊಬ್ಬರು "ವಿಚ್ಛೇದನದ ನಂತರ ಅನೇಕ ಮಹಿಳೆಯರ ಆರ್ಥಿಕ ಸ್ಥಿತಿ ದಾರಿದ್ರ್ಯ ರೇಖೆಯನ್ನು ಮುಟ್ಟುತ್ತದೆ ಅಥವಾ ಅದಕ್ಕಿಂತ ಕೆಳಗಿನ ಹಂತಕ್ಕೆ ಇಳಿಯುತ್ತದೆ. ಇವರಿಗೆ ಒಂದು ಒಳ್ಳೆಯ ಕೆಲಸ ಸಿಗುವಷ್ಟು ವಿದ್ಯಾರ್ಹತೆಯೂ ಇರುವುದಿಲ್ಲ ಒಂದು ಕೌಶಲ್ಯವೂ ಇರುವುದಿಲ್ಲ. ಕೊನೆಗೆ, ಇವರು ಸಂರಕ್ಷಣಾ ಕೇಂದ್ರಗಳನ್ನು ತಲುಪುತ್ತಾರೆ" ಎಂದು ಹೇಳಿದರು. ಇಂತಹ ಪರಿಸ್ಥಿತಿಗಳಲ್ಲಿ, ಆ ಮಕ್ಕಳಿಗಾಗಿ ಹೃದಯ ನಿಜಕ್ಕೂ ಪರಿತಪಿಸುತ್ತದೆ. ವಿಶ್ವದ ಅನೇಕ ದೇಶಗಳಲ್ಲಿ ಇರುವುದಕ್ಕಿಂತ ಸಾರ್ವಜನಿಕ ಶಿಕ್ಷಣವು ಅತ್ಯುತ್ತಮವಾಗಿರುವ ಈ ದೇಶದಲ್ಲಿ ಒಂದು ಗೌರವಾನ್ವಿತ ಪದವಿಯೂ ಇಲ್ಲದ ಮಹಿಳೆಯರು ಎಷ್ಟೊಂದು ಮಂದಿಯಿದ್ದಾರೆ ಎಂದರೆ ನಂಬುವುದೇ ಕಷ್ಟ! ಅಷ್ಟೇ ಅಲ್ಲ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಯಲ್ಲಿ ಅಮೇರಿಕಾಕ್ಕೆ ವಿಶ್ವದಲ್ಲೇ ಅಗ್ರಸ್ಥಾನ! ನನ್ನ ಪ್ರಕಾರ ಇದಕ್ಕೆ ಕೊಡಬಹುದಾದ ಒಂದೇ ಒಂದು ವಿವರಣೆಯೆಂದರೆ ಇಲ್ಲಿನ ಸಾಮಾಜಿಕ ಅಡಿಪಾಯ ಬಹಳ ಕಂದಾಚಾರದ್ದು ಹಾಗೂ ಪುರುಷ ಪ್ರಾಧಾನ್ಯದ್ದು. ಆಟೋಮೋಟಿವ್ ಉದ್ಯಮ, ಅಗ್ನಿಶಾಮಕ, ಮಿಲಿಟರಿ ಮತ್ತು ಪೊಲೀಸ್ ದಳಗಳು ಮುಂತಾದ ಪುರುಷಾಧಿಪತ್ಯದ ಕ್ಷೇತ್ರಗಳಿಗೆ ಇಲ್ಲಿನ ಮಹಿಳೆಯರು ಕಾಲಿಟ್ಟಿದ್ದಾರೆ. ಆದಾಗ್ಯೂ ಕೂಡ ಮಹಿಳೆಯರಿಗೆ ಲೈಂಗಿಕ ಹಾವಭಾವ ನೋಟಗಳಿರಬೇಕೆಂಬ ಒತ್ತಡ ಬಹಳವಿದೆ. ಅದಕ್ಕೆ ತಕ್ಕ ಉಡುಗೆ ತೊಡುಗೆಗಳು, ಮೇಕಪ್ ಸಲಕರಣೆಗಳು ಮತ್ತು ಅದಕ್ಕೆ ಹೊಂದುವ ಎತ್ತರದ ಹಿಮ್ಮಡಿಯ ಷೂಸುಗಳಿಗಿರುವ ಬೇಡಿಕೆಯೇ ಇದಕ್ಕೆ ನಿದರ್ಶನ.

ಇಲ್ಲಿರುವ ಲಿಂಗ ಪಡಿಯಚ್ಚುಗಳು ಬಾಲ್ಯದ ಆರಂಭ ದಿನಗಳಿಂದಲೇ ರೂಪುಗೊಳ್ಳುತ್ತದೆ. ನನ್ನ ಅಭಿಪ್ರಾಯವೇನೆಂದರೆ, ಹುಡುಗಿಯರು ತಮ್ಮ ಅಂದಚಂದಗಳಿಗೇ ಮಹತ್ವ ಕೊಡುವಂತೆ ಹಾಗೂ ತಮಗೆ ಆರಾಮದಾಯಕ ಅಥವಾ ಮಹತ್ವದ್ದೆನಿಸಿದ್ದನ್ನೂ ಮಾಡುವುದಕ್ಕಿಂತ ಬೇರೆಯವರ ಮೆಚ್ಚುಗೆ ಅಥವಾ ಹೊಗಳಿಕೆಯನ್ನು ಅರಸುವಂತೆ ಮಾಡಲು ಹೆಚ್ಚಿನ ಉತ್ತೇಜನ ಕೊಡುತ್ತಾರೆ. ವಾಸ್ತವದಲ್ಲಿ ಮಹಿಳೆಯರು ತಮ್ಮ ಅಂದ ಚಂದ ನೋಟಗಳಿಗೇ ಹೇಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆ ಎಂಬ

ಬಗ್ಗೆ ಸುದ್ದಿ ವರದಿಗಳನ್ನು ನೋಡಿದ್ದೇವೆ, ಲೇಖನಗಳನ್ನು ಓದಿದ್ದೇನೆ. ಬಾತ್ಮೀದಾರರು ಕಂಡು ಮಾತನಾಡಿಸಿದ ಬಹಳಷ್ಟು ಮಹಿಳೆಯರು ತಮ್ಮ ಕಾಲು - ಸೊಂಟ - ಬೆನ್ನುಗಳಲ್ಲಿ ಏನೇ ತೊಂದರೆ ಉಂಟಾದರೂ ಕೂಡ ತಾವು ಎತ್ತರದ ಹಿಮ್ಮಡಿಯ ಪಾದರಕ್ಷೆಗಳನ್ನು ಮುಂದೆಯು ಧರಿಸುತ್ತೇವೆ ಎಂದೇ ಹೇಳಿದರು. ಅದು ಯಾಕೆ? ತಮ್ಮ ಮೇಲೆ ಎಲ್ಲ ಗಮನ ಬೀಳಲಿ ಎಂಬ ಸಲುವಾಗಿ! ಓರ್ವ ಮಹಿಳೆ ತನಗೆ ಯಾವುದು ಆರಾಮದಾಯಕ ಅಥವಾ ಮುಖ್ಯ ಎನ್ನುವುದಕ್ಕಿಂತ ಅವಳ ಬಗ್ಗೆ ಬೇರೆಯವರ ಅಭಿಪ್ರಾಯವೇನಿದೆ ಎಂದು ತಿಳಿದುಕೊಳ್ಳಲು ಆಸಕ್ತಿ ಹೊಂದಿದ್ದ ಪಕ್ಷದಲ್ಲಿ ಆಕೆ ಆತ್ಮವಿಶ್ವಾಸ, ಸ್ವಾಭಿಮಾನಗಳನ್ನು ಬೆಳೆಸಿಕೊಳ್ಳುವುದಾದರೂ ಹೇಗೆ?

ಹಾಲಿವುಡ್ ಅಮೆರಿಕಾದ ಮಹಿಳೆಯರನ್ನು ಯಾವ ರೀತಿಯಲ್ಲಿ, ಅಂದರೆ ಕನಿಷ್ಠ ಉಡುಪು ತೊಟ್ಟು ಸಡಿಲ ಶೀಲ ಉಳ್ಳವರಂತೆ ಚಿತ್ರಿಸಿದೆಯೋ, ಅನೇಕ ದೇಶಗಳಲ್ಲಿ ಅವರ ಬಗ್ಗೆ ಅದೇ ಕಲ್ಪನೆಯ ಚಿತ್ರವಿದೆ. ಇಲ್ಲಿಗೆ ಬಂದ ನಂತರ ಅದೆಲ್ಲವೂ ಸತ್ಯವಲ್ಲವೆನ್ನುವುದು ನನಗೆ ಗೊತ್ತಾಯಿತು. ಈ ವಿವರಣೆಗೆ ಸರಿಹೊಂದುವವರು ಪ್ರಾಯಶಃ ಅಲ್ಪ ಸ್ವಲ್ಪ ಪ್ರಮಾಣದಲ್ಲಿರಬಹುದು. ಆದರೆ ಬಹಳಷ್ಟು ಮಂದಿಗೆ ತಮ್ಮ ಕುಟುಂಬದೊಂದಿಗೆ ನಿಕಟ ಬಾಂಧವ್ಯವಿದೆ. ಅವರು ಅಕ್ಕರೆ ಆದರ ತೋರುವ ಜಾಗ್ರತೆ ವಹಿಸುವ ತಾಯಂದಿರೂ ಆಗಿರುತ್ತಾರೆ. ಅವರ ಸಂಸ್ಕೃತಿಯಲ್ಲಿ ಅವಿಭಕ್ತ ಕುಟುಂಬದ ಪರಿಕಲ್ಪನೆ ಇಲ್ಲ. ಸಂಸ್ಕೃತಿಗಳಲ್ಲಿ ಮೂಲಭೂತ ವ್ಯತ್ಯಾಸ ಕಂಡುಬರುವುದು ಇಲ್ಲಿಯೇ. ಆದರೆ ಇಲ್ಲಿ ಅನೇಕ ಮಹಿಳೆಯರಿದ್ದಾರೆ. ಅವರು ಪ್ರತ್ಯೇಕವಾಗಿದ್ದುಕೊಂಡೇ ತಮ್ಮ ಕುಟುಂಬದ ಅಸ್ವಸ್ಥ ಮಂದಿಯನ್ನು ನೋಡಿಕೊಳ್ಳುತ್ತಾರೆ. ಇದು ಮತ್ತಷ್ಟು ಕಷ್ಟಕರವಾದದ್ದು. ಏಕೆಂದರೆ ಅವರು ತಮ್ಮ ಕುಟುಂಬದ ಅವಶ್ಯಕತೆಗಳನ್ನೂ ಗಮನಿಸಿಕೊಂಡು, ತಮ್ಮ ಹಿರಿಯರ ಆರೈಕೆಗಾಗಿ ಅವರಿರುವಲ್ಲಿಗೆ ಡ್ರೈವ್ ಮಾಡಿಕೊಂಡು ಹೋಗಬೇಕು. ಸಾಮನ್ಯವಾಗಿರುವ ನಂಬಿಕೆಗೆ ವ್ಯತಿರಿಕ್ತವಾಗಿ ಇಲ್ಲಿ 20 ವರ್ಷಗಳಿಗೂ ಹೆಚ್ಚಿನ ಸಮಯದಿಂದ ಮದುವೆ ಮಾಡಿಕೊಂಡು ಸಂಸಾರ ನಡೆಸುತ್ತಿರುವವರಿದ್ದಾರೆ. "ಅವಕಾಶ ಸಿಕ್ಕಿದರೆ ಸಾಕು - ಅಮೆರಿಕನ್ ಮಹಿಳೆಯರು ಲೈಂಗಿಕ ಕಿರುಕುಳಕ್ಕಾಗಿ ಪುರುಷರ ಮೇಲೆ ದಾವಾ ಹೂಡುತ್ತಾರೆ" ಇದು ಅಮೇರಿಕನ್ ಮಹಿಳೆಯರ ಬಗ್ಗೆ ಮತ್ತೊಂದು ನಂಬಿಕೆ.

ಇದನ್ನೂ ಅಷ್ಟೇ ಸತ್ಯವೆಂದು ನಾನು ಪರಿಗಣಿಸುವುದಿಲ್ಲ. ಈ ವಿಷಯದಲ್ಲಿ ಅತ್ಯಂತ ಪ್ರಖ್ಯಾತಿ ಪಡೆದ ಕೆಲವು ಪ್ರಕರಣಗಳೂ ಇವೆ. ಆದರೆ ಈ ಮಹಿಳೆಯರಿಗೆ ಅತ್ಯಂತ ಪ್ರಭಾವೀ ಜನರ ಅಥವಾ ಲಾಯರುಗಳ ಬೆಂಬಲವಿತ್ತು ಎಂಬುದನ್ನು ಜನ ಗಮನಿಸಬೇಕು. ವಾಸ್ತವದಲ್ಲಿ ಈ ಪ್ರಕರಣಗಳನ್ನೂ ಸಾಬೀತು ಮಾಡುವುದು ಬಲು ಕಷ್ಟ ಹಾಗೂ ಇಲ್ಲ ಓರ್ವ ಮಹಿಳೆಯ ಚಾರಿತ್ರ್ಯ, ಪ್ರಾಮಾಣಿಕತೆ ಮತ್ತು ವೈಯಕ್ತಿಕ ಜೀವನ ತೀವ್ರ ಪರೀಕ್ಷೆಗೆ ಒಳಪಡುತ್ತದೆ. ಜೊತೆಗೆ ಅವರಿಗೆ ಕೆಲಸ ಕಳೆದುಕೊಳ್ಳುವ ಹಾಗೂ ಮತ್ತೊಂದು ಕೆಲಸ ಸಿಗದಿರುವ ಅಪಾಯವೂ ಇದೆ. ಪುರುಷರು ಅನಗತ್ಯ ಟೀಕೆಗಳನ್ನೂ ಮಾಡಿದಾಗ ಅಥವಾ ಬೆನ್ನು ತಟ್ಟುವ ನೆಪದಲ್ಲಿ ಮುಟ್ಟಿದಾಗ, ಪ್ರತಿಭಟನೆಯೇ ಮಾಡದಿದ್ದ ಮಹಿಳೆಯರನ್ನು ನಾನು ಬಲ್ಲೆ. ಕೆಲವರಿಗೆ ಈ ವಿರುದ್ಧ ದನಿ ಕೂಡ ಎತ್ತಲಾರದಷ್ಟು ಅಂಜಿಕೆ. ತಮ್ಮ ಬಗ್ಗೆ ಯಾರೂ "ಕಡ್ಡಿಯನ್ನು ಗುಡ್ಡ ಮಾಡುತ್ತಿದ್ದೀಯೆ" ಎಂದು ಹೇಳಬಾರದೆನ್ನುವುದೇ ಇವರ ಮತ. ಇನ್ನೂ ಕೆಲವರಿಗೆ ಇಂತಹ ಪ್ರಸಂಗಗಳು ಆಶ್ಚರ್ಯಕರವಾಗಿ ಎದುರಾಗುತ್ತವೆ. ಆಗ ಹೇಗೆ ಪ್ರತಿಕ್ರಿಯಿಸಬೇಕೆಂಬುದೇ ಇವರಿಗೆ ತಿಳಿಯುವುದಿಲ್ಲ. ನಾನು ಬಲ್ಲಂಥ ಮಹಿಳೆಯೊಬ್ಬಳ ಅನುಭವವನ್ನು ಇಲ್ಲಿ ಬರೆಯುತ್ತಿದ್ದೇನೆ. ಆಕೆಗೆ ಸಣ್ಣ ವಯಸ್ಸಿನ ಮಗುವೊಂದಿತ್ತು. ಕುಟುಂಬ ನಿರ್ವಹಣೆಗೆ ಅವಳಿಗೆ ಆದಾಯದ ಅವಶ್ಯಕತೆಯಂತೂ ಬಹಳವೇ ಇತ್ತು. ಆಕೆ ಕಚೇರಿಯಲ್ಲಿ ಒಂಟಿಯಾಗಿದ್ದಾಗಲೆಲ್ಲಾ ತನ್ನ ಖಾಸಗೀ ಜೀವನದ ಬಗ್ಗೆ ಹೊಲಸು ಮಾತುಗಳನ್ನು ಅವಳಿಗೆ ಹೇಳುತ್ತಿದ್ದ ಮೇಲಧಿಕಾರಿಯೊಬ್ಬನಿದ್ದ. ಆಕೆ ಬಹಳ ಧೈರ್ಯವಂತಳಾದರೂ, ಈತ ಹತ್ತಿರದಲ್ಲಿದ್ದರೆ ಅವಳಿಗೆ ತುಂಬಾ ಭಯ. ತನ್ನ ಕೆಲಸ ಹೋದೀತು ಎಂಬ ಅಂಜಿಕೆಯಿಂದ ಈತನ ಬಗ್ಗೆ ದೂರು ನೀಡಲೂ ಭಯ. ಇದೇ ಕಾರಣಕ್ಕಾಗಿ ಅವಳ ರಕ್ತದೊತ್ತಡ ಏರುತ್ತಿತ್ತು. ಪ್ರತೀದಿನ ಕಚೇರಿಗೆ ಹೊರಡುವ ವೇಳೆಯಲ್ಲಿ ಅಸ್ವಸ್ಥಳಾಗುತ್ತಿದ್ದಳು. ಕೊನೆಗೆ ಈ ಮನುಷ್ಯನಿಂದ ತಪ್ಪಿಸಿಕೊಳ್ಳುವ ಸಲುವಾಗಿ ಕೆಲಸದ ಪಾಳಿಯನ್ನೇ ಬದಲಾಯಿಸಿಕೊಳ್ಳುವ ಬಗ್ಗೆಯೂ ಯೋಚಿಸಿದಳು. ಈ ಸಂಕಟವನ್ನು ಹಲವಾರು ತಿಂಗಳುಗಳ ಕಾಲ ಸಹಿಸಿದ ಆಕೆ ಕೊನೆಗೂ ಒಂದು ದಿನ ಸಾಕಷ್ಟು ಯೋಚನೆ ಮಾಡಿ, ಈ ವಿಷಯ ಅವಳಿಗೆ ಬಹಳ ಮುಜುಗರ ಉಂಟು ಮಾಡುತ್ತದೆಯೆಂದೂ, ದಯವಿಟ್ಟು ಹಾಗೆ ಮಾತನಾಡಬಾರದೆಂದೂ ಅವನಿಗೆ ಹೇಳುವಷ್ಟು ಧೈರ್ಯ ವಹಿಸಿದಳು. ಆದರೂ, ಅವಳಿಲ್ಲಿ ಮಾಡಿದ್ದು ವಿನಂತಿಯನ್ನು ಆದೇಶ ಕೊಡಲಿಲ್ಲ ಎಂಬುದನ್ನು ಗಮನಿಸಬೇಕು.

ಆ ನಂತರವೂ ಅವಳಿಗೆ ಕೆಲಸ ಕೈತಪ್ಪಿ ಹೋಗಬಹುದೆನ್ನುವ ಭಯ ಕಾಡುತ್ತಲೇ ಇತ್ತು. ಈ ವಿಷಯವೆಲ್ಲ ನನಗೆ ತಿಳಿದುಬಂದಾಗ ನನಗೂ ಸಹ ಆಘಾತವೇ ಆಯಿತು. ಏಕೆಂದರೆ ನನಗೆ ಗೊತ್ತಿದ್ದಂತೆ ಆಕೆ ಅತ್ಯಂತ ನಿರ್ಭೀತಿಯಿಂದ ಮಾತನಾಡುವಂಥ ಮಹಿಳೆ ; ಯಾರ 'ಅಸಂಬದ್ಧ ಪ್ರಲಾಪ'ವನ್ನು ಸಹಿಸಿಕೊಳ್ಳುವವಳಲ್ಲ. ಅಂತಹ ಮಹಿಳೆಗೇ ಇಂತಹ ಅನುಭವ ಕಾಡಿದರೆ, ಇನ್ನು ಸೌಮ್ಯ ಸ್ವಭಾವದ ಮಹಿಳೆಯರ ಪಾಡೇನು ಎಂದು ನಾನು ವಿಸ್ಮಯ ಪಡುತ್ತೇನೆ.

***ಅನುವಾದ : ಹೆಚ್. ಎಸ್. ಗೀತಾ***

# ಮಹಿಳಾ ರಾಜಕಾರಣಿಗಳ ಸಮಾವೇಶ



ಇಪ್ಪತ್ತು ವರ್ಷಗಳ ರಾಜಕೀಯದಲ್ಲಿ ಸಕ್ರಿಯವಾಗಿದ್ದ ರಾಯಪ್ಪ ಪೂಜಾರಿಯವರ ನಿಧನದ ನಂತರ ಅವರ ಪತ್ನಿ ಸಾಯವ್ವ ಪೂಜಾರಿ ಬಿಜಾಪುರದ ಅರಿಕೇರಿ ಗ್ರಾಮ ಪಂಚಾಯತಿಗೆ ಆಯ್ಕೆಯಾದರು. ಸತತವಾಗಿ ಎರಡು ಅವಧಿಗೆ ಆಯ್ಕೆಯಾದ ಸಾಯವ್ವ ಯಶಸ್ವಿ ಮಹಿಳಾ ರಾಜಕಾರಣಕ್ಕೆ ಉತ್ತಮ ನಿದರ್ಶನ. ಅವರೂರಿನ ನಾಲ್ಕಾರು ಸ್ತ್ರೀ ಶಕ್ತಿ ಗುಂಪುಗಳ ಹೆಂಗೆಳೆಯರನ್ನೆಲ್ಲಾ ಕೂಡಿಸಿ ಸಾರಾಯಿ ವಿರುದ್ದದ ಹೋರಾಟ ನಡೆಸಿದ ಸಾಯವ್ವ ತಮ್ಮ ಹೋರಾಟದಲ್ಲಿ ಜಯ ಕಂಡವರು. ತಮ್ಮ ಹೋರಾಟದ ವ್ಯಾಪ್ತಿಯನ್ನು ಸುತ್ತಮುತ್ತಲ ಸ್ಥಳಗಳಿಗೂ ವ್ಯಾಪಿಸಬೇಕೆಂದುಕೊಂಡ ಕನಸು ಕಟ್ಟಿಕೊಂಡವರು. ಎರಡನೇ ಇಯತ್ತೆಯವರೆಗೆ ಮಾತ್ರ ಓದಿಕೊಂಡಿರುವ ಸಾಯವ್ವನಿಗೆ ತಮ್ಮ ಹೋರಾಟದ ಸಾಧನೆಯನ್ನು ಹೇಳುವಾಗ ಮೈತುಂಬಿ ಬರುತ್ತದೆ. ತಮ್ಮ ಊರಿನಲ್ಲಿದ್ದ ಏಳೆಂಟು ಸೆರೆ ಅಂಗಡಿಗಳನ್ನು ಬಂದ್ ಮಾಡಿಸುವಾಗ ಅಂಗಡಿ ಮಾಲೀಕರಷ್ಟೇ ಅಲ್ಲದೆ ಸರಕಾರದ ವಿರೋಧವನ್ನೂ ಕಟ್ಟಿಕೊಳ್ಳಬೇಕಿತ್ತು. ಆದರೂ ಯಾವುದಕ್ಕೂ ಹಿಮ್ಮೆಟ್ಟದೆ ಎ.ಸಿ, ಡಿ.ಸಿ. ಕಛೇರಿಗಳಿಗೆಲ್ಲಾ ಅಲೆದು, ಅಲ್ಲೆಲ್ಲಾ ಪ್ರತಿಭಟನೆಯನ್ನು ಮಾಡಿ ಸಾರಾಯಿ ವಿರೋಧಿ ಚಳುವಳಿಯನ್ನು ಶಕ್ತವಾಗಿ ನಡೆಸಿದರು. ಅರಿಕೇರಿ ಗ್ರಾಮ ಪಂಚಾಯಿತಿಯ ಪುರುಷ ಸದಸ್ಯರ ಬೆಂಬಲವು ತಮಗಿತ್ತು ಎಂಬುದನ್ನು ಸ್ಮರಿಸಿಕೊಳ್ಳುವ ಸಾಯವ್ವ ತಮ್ಮ ಚಳುವಳಿಗೆ ಸರಕಾರದ ವಿರೋಧವಿತ್ತು, ಪೋಲಿಸರಿಂದ ಕಿರುಕುಳವಿತ್ತು ಎಂಬುದನ್ನು ಜ್ಞಾಪಿಸಿಕೊಳ್ಳುತ್ತಾರೆ.

ಇದು ಸಾಯವ್ವನವರ ಕತೆಯಾದರೆ, ಗೌರಮ್ಮ, ಗಂಗಮ್ಮ, ಸತ್ಯ, ಸುಶೀಲಮ್ಮ, ಹನುಮವ್ವ ನಾಯಕ್, ಶಕುಂತಲ ಒಬ್ಬೊಬ್ಬರೂ ಅನುಭವದ ಕತೆ ಕಿವಿ ನಿಮಿರುವಷ್ಟು ಹರಡಿಕೊಂಡಿತ್ತು. ಬೆಂಗಳೂರಿನಲ್ಲಿ ಕಳೆದವಾರ ಸಿಂಗಮ್ಮ ಶ್ರೀನಿವಾಸನ್ ಸಂಸ್ಥೆ ಸಂಘಟಿಸಿದ್ದ ಮಹಿಳಾ ಪಂಚಾಯತ್ ಪ್ರತಿನಿಧಿಗಳ ಸಮಾವೇಶದಲ್ಲಿ ಕಂಡು ಬಂದ ದೃಶ್ಯ ಮಹಿಳಾ ರಾಜಕಾರಣದ ಒಂದು ಚಿತ್ರವನ್ನು ನಮ್ಮ ಮುಂದಿಡುತ್ತಿತ್ತು. ಈ ಸಮಾವೇಶದ ಮುಖ್ಯ ವಿಷಯಗಳಲ್ಲೊಂದು ಲಿಂಗಾಧಾರಿತ ಆಯವ್ಯಯವನ್ನು ರಚಿಸುವುದು. ಸರ್ಕಾರದ ಆಯವ್ಯಯವು ಸ್ತ್ರೀ ಪುರುಷರ ಮತ್ತು ವಿವಿಧ ಗುಂಪುಗಳ ನಡುವೆ ಯಾವ ರೀತಿ ಪರಿಣಾಮ ಬೀರಿದೆ ಎಂದು ಅಧ್ಯಯನ ಮಾಡುವುದಾಗಿತ್ತು. ಶೇ 33ರಷ್ಟು ಮಹಿಳಾ ಮೀಸಲಾತಿಯ ಪರಿಣಾಮವಾಗಿ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸುವ ಅವಕಾಶ ಪಡೆದಿರುವರಾದರೂ ಚುನಾಯಿತ ಮಹಿಳಾ ಪ್ರತಿನಿಧಿಗಳಲ್ಲಿ ಬೆರಳೆಣಿಕೆಯಷ್ಟು ಮಹಿಳೆಯರು ಮಾತ್ರ ಬಜೆಟ್ ತಿಳಿದಿದ್ದಾರೆ. ಪ್ರಸ್ತುತ ದಿನಗಳಲ್ಲಿ ವಿಶ್ವಾದ್ಯಂತ ಮಹಿಳೆಯರನ್ನು ಸಮರ್ಥಗೊಳಿಸಿ, ಬಜೆಟ್ ತಯಾರಿಕೆಯಲ್ಲಿ ಪಾಲ್ಗೊಳ್ಳುವ ಅವಕಾಶವನ್ನು ಕಲ್ಪಿಸಿ, ಆರ್ಥಿಕ ಅಭಿವೃದ್ಧಿ ಸಾಧಿಸುವ ಗುರಿಯತ್ತ ನಡೆಯುತ್ತಿರುವುದು ಒಂದು ಗಮನಾರ್ಹ ವಿಷಯವಾಗಿದೆ.

ಈ ಹಿನ್ನೆಲೆಯಲ್ಲಿ ಸಿಂಗಮ್ಮ ಶ್ರೀನಿವಾಸನ್ ಸಂಸ್ಥೆಯು ಯೂನಿಫೆಮ್ ಜೊತೆಗೂಡಿ ಅವರ ಆರ್ಥಿಕ

ನೆರವಿನೊಂದಿಗೆ 'ಬಜೆಟ್ ತಯಾರಿಕೆಯಲ್ಲಿ ಚುನಾಯಿತ ಮಹಿಳಾ ಪ್ರತಿನಿಧಿಗಳ ಪಾತ್ರ' ಕುರಿತಾದ ಒಂದು ಅಧ್ಯಯನವನ್ನು ಯಶಸ್ವಿಯಾಗಿ ನಡೆಸಿ, ವರದಿಯನ್ನು ಹೊರತಂದಿದೆ. ಗ್ರಾಮ ಪಂಚಾಯಿತಿಯಿಂದ ತಯಾರಿಸಲ್ಪಟ್ಟ ಬಜೆಟ್‌ನ್ನು ಅಳಿಸಿಹಾಕಿ ತಮ್ಮ ಕನಸಿನ ಬಜೆಟ್‌ನ್ನು ತಯಾರಿಸುವ ಅವಕಾಶವನ್ನು ಚುನಾಯಿತ ಮಹಿಳಾ ಪ್ರತಿನಿದಿಗಳಿಗೆ ಕಲ್ಪಿಸಿ, ಅವರಿಗೆ ಅವಕಾಶ ಕೊಟ್ಟರೆ ಬಜೆಟ್ ತಯಾರಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ ಎಂಬುದನ್ನು ತೋರಿಸಿಕೊಟ್ಟಿದೆ.

ಗ್ರಾಮ ಪಂಚಾಯತ್ / ನಗರಸಭೆಯಲ್ಲಿ ಇರುವ ಬಜೆಟ್‌ನ್ನು ಒಡೆದು ಚುನಾಯಿತ ಮಹಿಳಾ ಪ್ರತಿನಿಧಿಗಳ ಕನಸಿನ ಬಜೆಟ್‌ನ್ನು ತಯಾರಿಸುವುದು ಈ ಅಧ್ಯಯನದ ಒಂದು ಮುಖ್ಯ ಉದ್ದೇಶವಾಗಿದ್ದು ಈ ಕಾರ್ಯವನ್ನು ಅಧ್ಯಯನ ತಂಡ ಮೂರು ಹಂತಗಳಲ್ಲಿ ಕಾರ್ಯನಿರ್ವಹಿಸಿದೆ. ಮೊದಲನೆಯ ಹಂತದಲ್ಲಿ ಅಧ್ಯಯನ ತಂಡವು ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ಯಾವ ರೀತಿಯ ಅರಿವು ಇದೆ, ಬಜೆಟ್‌ನ್ನು ಯಾರು ತಯಾರಿಸುತ್ತಾರೆ. ಇವರು ಬಜೆಟ್ ಸಭೆಗಳಲ್ಲಿ ಭಾಗವಹಿಸುತ್ತಾರೆಯೇ, ಬಜೆಟ್ ತಯಾರಿಕಾ ಸಭೆಗಳಲ್ಲಿ ಮಹಿಳಾ ಪ್ರತಿನಿಧಿಗಳ ಮಾತಿಗೆ ಮನ್ನಣೆ ಇರುತ್ತದೆಯೇ, ಯಾವ ಆಧಾರದ ಮೇಲೆ ಬಜೆಟ್ ತಯಾರಿಸುತ್ತಾರೆ ಮತ್ತು ಅವರ ಜೀವನಕ್ರಮ ಮುಂತಾದ ವಿಷಯಗಳ ಬಗ್ಗೆ ವೈಯಕ್ತಿಕ ಭೇಟಿ ಮತ್ತು ಗುಂಪು ಚರ್ಚೆಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿತ್ತು.

ಎರಡನೆಯ ಹಂತದಲ್ಲಿ ಪ್ರತಿಯೊಬ್ಬ ಮಹಿಳಾ ಪ್ರತಿನಿಧಿಗಳನ್ನು ವೈಯಕ್ತಿಕವಾಗಿ ಭೇಟಿ ಮಾಡಿ, ಅವರ ಕನಸಿನ ಬಜೆಟ್ ಬಗ್ಗೆ ಅಂದರೆ ಅವರ ಹಳ್ಳಿಗೆ ಅಗತ್ಯವಾಗಿ ಆಗಬೇಕಾದ ಕಾಮಗಾರಿಗಳು ಯಾವುವು ಅದಕ್ಕೆ ಎಷ್ಟು ಬಜೆಟ್ ಬೇಕಾಗುವುದು ಅಗತ್ಯವಾಗಿ ಆಗಬೇಕಾಗಿರುವ ಕಾಮಗಾರಿಗಳಲ್ಲಿ ಯಾವುದಕ್ಕೆ ಮೊದಲು ಆದ್ಯತೆ ನೀಡುತ್ತಾರೆ ಎಂಬ ವಿಷಯಗಳನ್ನು ಸಂಗ್ರಹಿಸಲಾಯಿತು. ನಂತರ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಪ್ರತಿಯೊಂದು ಹಳ್ಳಿಗಳಲ್ಲಿ ಚುನಾಯಿತ ಮಹಿಳಾ ಪ್ರತಿನಿಧಿಗಳು ಮತ್ತು ಸ್ವಸಹಾಯ ಸಂಘಗಳ ಪ್ರತಿನಿಧಿಗಳನ್ನು ಒಂದುಗೂಡಿಸಿ ಗುಂಪು ಚರ್ಚೆಗಳನ್ನು ನಡೆಸಿ ಅಲ್ಲಿ ಅವರ ಅನಿಸಿಕೆ ಮತ್ತು ಅನುಭವಗಳನ್ನು ಪರಸ್ಪರ ಚರ್ಚಿಸಲಾಯಿತು ಮತ್ತು ಅವರ ವಾರ್ಡುಗಳಲ್ಲಿ ಜರುಗಬೇಕಾದ ಕಾಮಗಾರಿಗಳನ್ನು ಆದ್ಯತೆಯ ಅನುಸಾರ ಗುರ್ತಿಸಲು ತಿಳಿಸಲಾಯಿತು.

ಮೂರನೆಯ ಹಂತದಲ್ಲಿ ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ತಮ್ಮ ಕನಸಿನ ಬಜೆಟ್‌ನ್ನು ತಯಾರಿಸಲು ಅನುವು ಮಾಡಿ ಬಜೆಟ್ ತಯಾರಿಸಲು ಸಭೆಯನ್ನು ಏರ್ಪಡಿಸಲಾಯಿತು. ಚುನಾಯಿತ ಮಹಿಳಾ ಪ್ರತಿನಿಧಿಗಳು ಕಾಮಗಾರಿಗಳ ಆದ್ಯತಾನುಸಾರ ತಮ್ಮ ಕನಸಿನ ಬಜೆಟ್‌ನ್ನು ತಯಾರಿಸಲು ಅವರವರ ಸಲಹೆ, ಸೂಚನೆಗಳನ್ನು ನೀಡಿದರು. ನಂತರ ಮೂವರು ಚುನಾಯಿತ ಮಹಿಳಾ ಪ್ರತಿನಿಧಿಗಳನ್ನು ಆಧ್ಯಕ್ಷರು, ಉಪಾಧ್ಯಕ್ಷರು ಮತ್ತು ಕಾರ್ಯದರ್ಶಿಗಳನ್ನಾಗಿ ನೇಮಿಸಿ ಅವರ ದೃಷ್ಟಿಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳ ಆದ್ಯತೆಯನ್ನು ಗುರುತಿಸಲಾಯಿತು.

**ಈ ಸಂದರ್ಭದಲ್ಲಿ ಹಲವಾರು ಗಮನಾರ್ಹ ಸೂಚನೆಗಳು ಮೂಡಿಬಂದವು :**

1) ಹಣಕಾಸು ಮತ್ತು ತೆರಿಗೆ ಸುಧಾರಣಾ ಆಯೋಗಗಳ ಆದಾಯ ಮತ್ತು ವೆಚ್ಚಗಳ ವಿಷಯಗಳನ್ನು ತೀರ್ಮಾನಿಸುವ ಎಲ್ಲಾ ವಿಭಾಗಗಳಲ್ಲಿ ಆರ್ಥಿಕವಾಗಿ ತೀರ್ಮಾನ ತೆಗೆದುಕೊಳ್ಳಲು ಮಹಿಳೆಯರ ಭಾಗವಹಿಸುವಿಕೆಯನ್ನು ಹೆಚ್ಚಿಸುವುದು.

2) ಪಂಚಾಯತ್ ರಾಜ್ ಸಂಸ್ಥೆ ಮತ್ತು ನಗರ ಸ್ಥಳೀಯ ಸರ್ಕಾರಗಳಲ್ಲಿ ವಿಶೇಷವಾಗಿ ಹಣಕಾಸು ನಿಧಿಯನ್ನು ಮಹಿಳೆಯರ ಕಲ್ಯಾಣಕ್ಕೋಸ್ಕರ ಉಪಯೋಗಿಸಲು ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ಒದಗಿಸುವುದು.

3) ಹನ್ನೊಂದನೇ ಹಣಕಾಸು ಆಯೋಗವು ನಿರ್ದೇಶಿಸಿರುವಂತೆ, ಹನ್ನೊಂದನೇ ಅಧಿಸೂಚನೆಯ ಅಡಿಯಲ್ಲಿ ಹಣಕಾಸು ವಿತರಣೆಯನ್ನು ರಾಜ್ಯಗಳು ಜಾರಿಗೊಳಿಸುತ್ತವೆಯೇ ಎಂಬುದನ್ನು ನೋಡಿಕೊಳ್ಳುವುದು.

4) ಚುನಾಯಿತ ಮಹಿಳಾ ಪ್ರತಿನಿಧಿಗಳಿಗೆ ಯೋಜನೆಗಳನ್ನು ತಯಾರಿಸಲು ಮಾರ್ಗದರ್ಶನ ಮತ್ತು ಸಹಾಯ ಮಾಡುವಂತಹ ಉಪಯುಕ್ತವಾದ ಮಹಿಳಾ ಸಂಪನ್ಮೂಲ ಕೇಂದ್ರಗಳನ್ನು ದೊರಕಿಸುವುದು.

5) ನೀರಿನ ಸಮಿತಿ, ಆರೋಗ್ಯ ಸಮಿತಿ ಮತ್ತು ಜಂಟಿ ಅರಣ್ಯ ಸಮಿತಿಗಳಂತಹ ವ್ಯವಸ್ಥಿತ ಸಮಿತಿಗಳನ್ನು ಚುರುಕಾಗಿ ಮತ್ತು ಆಸಕ್ತಿಯಿಂದ ಕೈಗೊಳ್ಳಲು ಮಹಿಳಾ ಸದಸ್ಯರನ್ನು ಪ್ರೇರೇಪಿಸುವುದು.

6) ಮಹಿಳಾ ಸದಸ್ಯರಿಗೆ ಜ್ಞಾನ ನೀಡುವ, ಅವರ ದೃಷ್ಟಿಕೋನವನ್ನು ಅಭಿವೃದ್ಧಿಪಡಿಸುವ ಮತ್ತು ಅವರ ಸ್ವಂತ ಹಳ್ಳಿಗಳನ್ನು ಅಭಿವೃದ್ಧಿ ಪಡಿಸಲು ನೆರವಾಗುವಂತಹ ಸಂಪನ್ಮೂಲಗಳ ವಿವರಣಾ ಪಟ್ಟಿಯನ್ನು ಅವರ ವಾರ್ಡ್‌ಗಳಲ್ಲಿ ತಯಾರಿಸುವಂತೆ ಪ್ರೇರೇಪಿಸುವುದು.

7) ರಾಜಕೀಯ, ಸ್ವಸಹಾಯ ಗುಂಪುಗಳು ಅಥವಾ ಯೋಜನಾ ಗುಂಪುಗಳ ಬಗ್ಗೆ ಆಸಕ್ತಿಯನ್ನು ಅಭಿವೃದ್ಧಿ ಪಡಿಸಲು ಹುಡುಗಿಯರನ್ನು ಮತ್ತು ಯುವ ಮಹಿಳೆಯರನ್ನು ಪ್ರೇರೇಪಿಸುವುದು.

ಮಹಿಳಾ ಸಶಕ್ತೀಕರಣ ಮತ್ತು ಬಡಮಹಿಳೆಯರ ಆರ್ಥಿಕ ಅಭಿವೃದ್ಧಿಯನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಈ ಅಧ್ಯಯನವನ್ನು ಹಮ್ಮಿಕೊಂಡಿದ್ದು, ಗ್ರಾಮ ಪಂಚಾಯತ್ ಮಟ್ಟದಲ್ಲಿ ಬಜೆಟ್ ತಯಾರಿಸುವ ಸಭೆಗಳಲ್ಲಿ ಚುನಾಯಿತ ಮಹಿಳಾ ಜನಪ್ರತಿನಿಧಿಗಳಿಗೆ ಭಾಗವಹಿಸುವ ಅವಕಾಶವನ್ನು ಕಲ್ಪಿಸಿ, ಈ ಮೂಲಕ ರಾಜ್ಯ ಮತ್ತು ಕೇಂದ್ರ ಸರ್ಕಾರಕ್ಕೆ ನೀತಿ ನಿರೂಪಿಸುವ ಮಟ್ಟಕ್ಕೆ ಅವರನ್ನು ಕರೆದೊಯ್ಯುವುದು ಈ ಯೋಜನೆಯ ಕಾರ್ಯವಾಗಿದೆ. ಈ ನಿಟ್ಟಿನಲ್ಲಿ ಅಂಕಿ ಅಂಶಗಳನ್ನು ಸಂಗ್ರಹಿಸುವುದು, ಅವರ ಜೀವನಕ್ರಮ, ಅವರ ಆಕಾಂಕ್ಷೆ, ಆರ್ಥಿಕಾಭಿವೃದ್ಧಿ, ಹಳ್ಳಿಯ ಅಭಿವೃದ್ಧಿ ಮುಂತಾದವುಗಳನ್ನು ಪರಿಶೀಲಿಸಲಾಗಿದೆ. ಈ ಅಧ್ಯಯನದ ಮಾದರಿಗಾಗಿ ಹೊನಗನಹಳ್ಳಿ ಗ್ರಾಮ ಪಂಚಾಯತಿ (ಬಿಜಾಪುರ ಜಿಲ್ಲೆ), ಕೋಗಾಳಿ ಗ್ರಾಮ ಪಂಚಾಯತ್ (ಬಳ್ಳಾರಿ ಜಿಲ್ಲೆ), ಉಡುಪಿ ನಗರ ಸಭೆ (ಉಡುಪಿ ಜಿಲ್ಲೆ), ಮೈಸೂರು ಮಹಾನಗರ ಪಾಲಿಕೆ (ಮೈಸೂರು ಜಿಲ್ಲೆ)ಯನ್ನು ಅಧ್ಯಯನ ಮಾಡಿ ಅಲ್ಲಿ ಕಂಡು ಬಂದ ಫಲಿತಾಂಶಗಳ ಆಧಾರದ ಮೇಲೆ ಬಜೆಟ್ ವಿಶ್ಲೇಷಣೆ, ತಯ್ಯಾರಿಗೆ ಮಾದರಿಗಳನ್ನು ರೂಪಿಸಿಕೊಳ್ಳಲಾಯಿತು.

ಬಿಜಾಪುರ, ಗುಲ್ಬರ್ಗ, ಬೀದರ್, ರಾಯಚೂರು, ಕೊಪ್ಪಳ, ಮೈಸೂರು, ಚಾಮರಾಜನಗರ, ಬಳ್ಳಾರಿ ಮತ್ತು ಚಿಕ್ಕಮಂಗಳೂರು - ಹೀಗೆ ಒಟ್ಟು ಒಂಭತ್ತು ಜಿಲ್ಲೆಗಳಿಂದ ಸುಮಾರು ಮುನ್ನೂರು ಪಂಚಾಯಿತಿ ಮಹಿಳಾ ಪ್ರತಿನಿಧಿಗಳು ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಈಗಾಗಲೇ ಜಿಲ್ಲೆಗಳಲ್ಲಿನ ಮಹಿಳಾ ಪ್ರತಿನಿಧಿಗಳನ್ನು ಒಗ್ಗೂಡಿಸಿ ಫೆಡರೇಷನ್‌ನ ಚೌಕಟ್ಟಿನಲ್ಲಿ ಅವರನ್ನು ತಂದಿರುವುದಲ್ಲದೆ ಈ ಸಂಘಟನೆಯನ್ನು ಇನ್ನೂ ರಾಜ್ಯಮಟ್ಟಕ್ಕೆ ವಿಶಾಲವಾಗಿ ವ್ಯಾಪಿಸುವ ಉದ್ದೇಶ ಸಂಘಟಕರದು. ಹೀಗೆಯೇ ಆಂಧ್ರ, ತಮಿಳುನಾಡು ಮತ್ತು ಕೇರಳದಲ್ಲಿ ಲೋಕಸತ್ತ ಆಶ್ರಯದಲ್ಲಿ ಸಂಘಟಿತರಾಗಿರುವ ಚುನಾಯಿತ ಮಹಿಳಾ ಪ್ರತಿನಿಧಿಗಳ ಫೆಡರೇಷನ್‌ನೊಂದಿಗೆ ಒಂದು ರೀತಿಯ ಸಂಪರ್ಕವಿರಿಸಿಕೊಂಡು ದಕ್ಷಿಣ ಭಾರತದ ಮಹಿಳಾ ರಾಜಕಾರಣಿಗಳ ಫೆಡರೇಷನ್ ಮಾಡುವ ಉದ್ದೇಶವನ್ನು ಈ ಸಮ್ಮೇಳನದಲ್ಲಿ ವ್ಯಕ್ತಪಡಿಸಲಾಯಿತು. ಆಂಧ್ರ ಮತ್ತು ತಮಿಳುನಾಡಿನಿಂದ ಬಂದ ಚುನಾಯಿತ ಪ್ರತಿನಿಧಿಗಳು ತಮ್ಮ ರಾಜ್ಯದ ಸಂಘಟನೆಯ ಅನುಭವಗಳನ್ನು, ಸಾಧನೆಯನ್ನೂ ಉಳಿದವರೊಂದಿಗೆ ವಿವಿಧ ಗುಂಪುಗಳಾಗಿ ಒಡೆದು ಅವರ ರಾಜಕೀಯ ಅನುಭವಗಳನ್ನು ಕುರಿತು ಮಾಹಿತಿ ಸಂಗ್ರಹಿಸಲಾಯಿತು. ಸಾಕ್ಷ್ಯ ಚಿತ್ರಗಳ ಮೂಲಕ ಮಹಿಳೆಯರ ಸಾಧನೆಯನ್ನು ಅವರಿಗೆ ಪರಿಚಯಿಸಲಾಯಿತು. ಎಲ್ಲ ಪ್ರತಿನಿಧಿಗಳಿಗೂ ವೇದಿಕೆಯ ಮೇಲೆ ಬಂದು ಅವರ ಅನುಭವ ಮತ್ತು ಬೇಡಿಕೆಗಳನ್ನು ಕುರಿತು ಮಾತನಾಡುವಂತೆ ಕೇಳಿಕೊಂಡದ್ದೇ ಒಬ್ಬೊಬ್ಬರು ಮೈಕ್ ಮುಂದೆ ನಿಂತು ಮಾತಿನ ಸುರಿಮಳೆಯನ್ನೇ ಹರಿಸಿದರು.

ಈ ಸಮಾವೇಶವು ನಿರ್ದಿಷ್ಟವಾದ ಕೆಲವು ನಿರ್ಣಯಗಳೊಂದಿಗೆ ಕೊನೆಗೊಂಡಿದೆ. ರಾಜ್ಯಮಟ್ಟದ ಫೆಡರೇಷನ್ ರೂಪಿಸುವುದರೊಂದಿಗೆ ಜೊತೆಯಲ್ಲಿ ದಕ್ಷಿಣ ಭಾರತದ ವ್ಯಾಪ್ತಿಗೂ ಇದನ್ನು ವಿಸ್ತರಿಸುವ ನಿರ್ಣಯ ಮಂಡಿತವಾಯಿತು. ಮುಂಬರುವ ಚುನಾವಣೆಗಳಲ್ಲಿ ಮಹಿಳೆಯರ ವಿಷಯಗಳಿಗೆ, ಅಭ್ಯರ್ಥಿಗಳಿಗೆ ಆದ್ಯತೆಯನ್ನು ಒತ್ತಾಯಿಸಲಾಯಿತು. ಚುನಾವಣೆಯಲ್ಲಿ ಭ್ರಷ್ಟಾಚಾರ ತಡೆಯಬೇಕೆಂಬ ನಿರ್ಣಯದೊಂದಿಗೆ, ಪ್ಲೇವಿನ್ ಲಾಟರಿಯನ್ನು ನಿಷೇಧಿಸಬೇಕೆಂಬುದು ಒಂದು ಮುಖ್ಯ ಬೇಡಿಕೆಯಾಗಿತ್ತು.



CPMG/KA/BG-8/2003-05 RNI No. 45577/88
*Posted at Basavanagudi P.O. On the 25th of every Month*

## ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ
## ವಿಚಾರ ಸಂಕಿರಣ

**ವಿಷಯ :**
ಸ್ತ್ರೀಭ್ರೂಣ ಹತ್ಯೆ - ಸಮಸ್ಯೆಗಳು ಮತ್ತು ಸವಾಲುಗಳು

**ಉದ್ಘಾಟನೆ :**
ಡಾ। ಎಂ. ಎಸ್. ತಿಮ್ಮಪ್ಪ

**ಮುಖ್ಯ ಅತಿಥಿ :**
ಡಾ। ಎಚ್. ಸುದರ್ಶನ್

**ಪುಸ್ತಕ ಬಿಡುಗಡೆ :**
'ಹೆಣ್ಣು ಭ್ರೂಣಗರ್ಭಪಾತ'
ಮಹಾದುರಂತದ ಅಂಚಿನಲ್ಲಿ

**ಗೋಷ್ಠಿ - 1**

ಸ್ತ್ರೀಭ್ರೂಣ ಹತ್ಯೆ - ವೈದ್ಯಕೀಯ ಆಯಾಮಗಳು
ವಿಷಯ ಮಂಡನೆ - ಡಾ। ಸಂಜೀವ ಕುಲಕರ್ಣಿ
ಚರ್ಚೆಯಲ್ಲಿ - ಡಾ। ಹೆಚ್. ಗಿರಿಜಮ್ಮ
- ಡಾ। ಹೆಚ್. ಆರ್. ನಂದಿನಿ ದೇವಿ

**ಗೋಷ್ಠಿ - 2**

ಸ್ತ್ರೀ ಭ್ರೂಣ ಹತ್ಯೆ - ಸಾಮಾಜಿಕ ಸಾಂಸ್ಕೃತಿಕ ಆಯಾಮಗಳು
ವಿಷಯ ಮಂಡನೆ - ಶ್ರೀಮತಿ ಹೇಮಲತಾ ಮಹಿಷಿ
ಚರ್ಚೆಯಲ್ಲಿ - ಶ್ರೀಮತಿ ಕೆ. ಜಿ. ನಾಗಲಕ್ಷ್ಮಿ ಬಾಯಿ
ಶ್ರೀಮತಿ ತಸ್ಮಿನ್ ತಾಜ್

ಸ್ಥಳ : **'ಜ್ಞಾನಜ್ಯೋತಿ'** ಸಭಾಂಗಣದ ಸೆಮಿನಾರ್ ಹಾಲ್
ಸೆಂಟ್ರಲ್ ಕಾಲೇಜು ಆವರಣ

***ದಿನಾಂಕ: ಮಾರ್ಚ್ 6, 2004ರಂದು ಬೆಳಗ್ಗೆ 10.30ಕ್ಕೆ***

***'ನೆರವು' ಮತ್ತು ಬೆಂಗಳೂರು ವಿಶ್ವವಿದ್ಯಾಲಯದ***
***ಪ್ರಸಾರಾಂಗದ ಸಹಯೋಗದೊಂದಿಗೆ***

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To :

Smt/Sri